

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೪ ಜುಲೈ ೨೦೦೮ ಸಂಚಿಕೆ : ೭

## ಕೊರಟಗೆರೆ ತಾಲ್ಲೂಕು ಶ್ರೀ ಸಿದ್ಧರ ಬೆಟ್ಟ ಸುಕ್ಷೇತ್ರದಲ್ಲಿ ರೇಣುಕ ಜಯಂತಿ, ಗ್ರಾಮಾಂತರ ಬಸವ ಜಯಂತಿ ಹಾಗೂ ಗುರುವಂದನಾ ಕಾರ್ಯಕ್ರಮ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮದ ಉದ್ಘಾಟನೆ. ವೇದಿಕೆಯಲ್ಲಿ ಸಿದ್ಧರ ಬೆಟ್ಟ ಕ್ಷೇತ್ರದ ಪೂಜ್ಯ ಶ್ರೀ ಶ್ರೀ ವೀರಭದ್ರ ಶಿವಾಚಾರ್ಯ ಸ್ವಾಮಿಗಳು ಹಾಗೂ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪ ಮೊದಲಾದ ಗಣ್ಯರು



ತುಮಕೂರು ಸಮೀಪದಲ್ಲಿರುವ ಮಂದರಗಿರಿಯಲ್ಲಿ ನಡೆದ ಭಗವಾನ್ ೧೦೦೮ ಚಂದ್ರಪ್ರಭಾ ತೀರ್ಥಂಕಾರರ ದಿನಬಿಂಬ ಪಂಚಕಲ್ಯಾಣ ಪ್ರತಿಷ್ಠಾಪನಾ ಸಮಾರಂಭದಲ್ಲಿ ಪೂಜ್ಯ ಶ್ರೀಗಳವರು ಹಾಗೂ ಜೈನ ಮುನಿಗಳು




ತುಮಕೂರು ರೋಟರಿ ಕ್ಲಬ್‌ನ ಸುವರ್ಣ ಮಹೋತ್ಸವ ಸಮಾರಂಭವನ್ನು ಪರಮಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ವೇದಿಕೆಯಲ್ಲಿ ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗಡೆ ಹಾಗೂ ರೋಟರಿ ಪದಾದಿಕಾರಿಗಳು

ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ
ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ

**ಹೋಟೆಲ್ ಶ್ರೀ ವಿಘ್ನೇಶ್ವರ ಕಂಫರ್ಟ್**

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2255883, 2257770, 2257774, 2257772 ಫ್ಯಾಕ್ಸ್ : 2255873



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣತ ಸಿಬ್ಬಂದಿಯ ವಿನೀತ ಸೇವೆ

ಲಿಫ್ಟ್ ಸೌಲಭ್ಯವಿದೆ

ಹವಾನಿಯಂತ್ರಿತ ಉಪಹಾರ ಗೃಹ

ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ





ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ**
**ಆಫ್‌ಸೆಟ್ ಮುದ್ರಣಾಲಯ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104




॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೪ ಜುಲೈ ೨೦೦೮ ಸಂಚಿಕೆ : ೭


## ಒಳಪುಟಗಳಲ್ಲಿ ......................




ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

***ನೋಟವಾಗದ ಮುನ್ನ ಬೇಟವಾಯಿತ್ತು,***
***ಬೇಟವಾಗದ ಮುನ್ನ ಕೂಟವಾಯಿತ್ತು,***
***ಕೂಟವಾಗದ ಮುನ್ನ ಬಸುರಾಯಿತ್ತಯ್ಯ,***
***ಬೇನೆ ತೋರದ ಮುನ್ನ ಬೆಸಲಾಯಿತ್ತಯ್ಯ,***
***ಬೆಸನಾದ ಶಿಶುವೆದ್ದು ತಂದೆಯನಪ್ಪಲು***
***ಪಶುಪತಿ ಐಕ್ಯವಾದುದು ಸೋಜಿಗವಯ್ಯಾ***
***ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.***

ನೋಟವಾಗದ ಮುನ್ನ-ಶರಣಲಿಂಗಕ್ಕೆ ಸಮರಸ ನಿರೀಕ್ಷಣೆಯುಂಟಾಗದ ಕ್ಷಣದಲ್ಲಿಯೇ, ಬೇಟವಾಯಿತ್ತು. ಶರಣ ಲಿಂಗಕ್ಕೆ ಸಮರಸ ಸ್ನೇಹ ದೊರೆಕೊಂಡಿತ್ತು. ಶರಣ ಲಿಂಗಕ್ಕೆ ಸಮರಸ ಸಂಯೋಗವು ದೊರೆಕೊಂಡಿತ್ತು. ಕೂಟವಾಗದ ಮುನ್ನ ಶರಣ ಲಿಂಗಕ್ಕೆ ಸಮರಸ ಸಂಯೋಗವಾದ ಕ್ಷಣವೆ ಬಸುರಾಯಿತ್ತಯ್ಯ-ಶರಣಂಗೆ ಚಿದ್ಗರ್ಭ ದೋರಿತ್ತಯ್ಯ ಬೇನೆ ತೋರದ ಮುನ್ನ ಶರಣನಲ್ಲಿ ಲಿಂಗ ವಿಕಲಾವಸ್ಥೆಯುಂಟಾದ ಕ್ಷಣವೆ ಬೆಸಲಾಯಿತ್ತಯ್ಯ ಜ್ಞಾನಲಿಂಗವೆಂಬ ಚಿತ್ಪುತ್ರನುದಯವಾದನು. ಬೆಸನಾದ ಶಿಶುವೆದ್ದು ಉದಯವಾದ ಚಿತ್ಪುತ್ರನಿಗೆ ಅರಿವಧಿಕವಾಗಿ ಕ್ರಿಯಾಚಾರವನತಿಕ್ರಮಿಸಿ ತಂದೆಯನಪ್ಪಲು ಆದಿ ಕಾರಣವಾದ ಮಹಾಲಿಂಗದಲ್ಲಿ ಕೂಡಲು ಪಶುಪತಿ ಐಕ್ಯವಾದುದು ಸೋಜಿಗವಯ್ಯ ಬ್ರಹ್ಮಾದಿಪಶುಗಳಿಗೊಡೆಯನಾದ ಪರಶಿವ ಲಿಂಗದಲ್ಲಿ ವಿಕಾರ್ಥವಾದುದತ್ಯಾಶ್ಚರ್ಯ

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮೂರುಕಾಲಗಳಲಿ ನೂರು ಬಾರಿನೆನೆವೆ
ಆರು ಸ್ಥಲಗಳಸಿರಿ-ಶರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮನು ನೆನೆವಾಗ ಲಗ್ನವ ಕಾಣೆನು
ನಿಮ್ಮನು ನೆನೆವಾಗ ವಿಘ್ನವನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವು ನುಡಿದುದೆ ಕಾವ್ಯ ನೀವು ನುಡಿದುದೆ ಮಂತ್ರ
ನೀವು ನುಡಿದುದೆ ಶಿವತತ್ವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವೆಯಕೊಡು ಎನಗೆ ಸೇವೆಯ ನೀಡೆನಗೆ
ಸೇವೆಯಲ್ಲಿಸಿರಿ ಕಾಪಾಡು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿದಂತೆ ಇರಬೇಕು ಅರಿಯದಂತಿರಬೇಕು
ಅರಿದು ಮರೆದು ಮನಮಡಿಮಾಡಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹದ ಅನುವನೀನೆ ಬಲ್ಲೆ ಅಯ್ಯ
ದಾಸೋಹದ ಸಿರಿಯ ನೀನಯ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯಪ್ರಸಾದಿಯೆ ನಿತ್ಯಪ್ರಸಾದಿಯೆ
ತತ್ವನಿರಂಜನ ಶಿವರವಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನೆಂಬೇನೆಂಬೆ ತವಸಿರಿಯ ಸೇವೆಯನು
ನಾಕಾಣೆ ನಾಕಾಣೆನೆಲ್ಲೂಲ್ಲೂ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಯ್ಯಾ ನಿಮ್ಮ ನಿಲುವು ಯಾರಿಗೂ ಅರಿಯದು
ಅಯ್ಯಾ ನಿಮ್ಮ ಲೀಲೆ ಶಿವನಾಟ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯದ ಕಳವಳಕೆ ಕಾಯಕವೆ ಸಿರಿದಾರಿ
ಮನದ ಮಾಲಿನ್ಯಕೆ ದಾಸೋಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಚಿಂತೆ

*ಶಿಕ್ಷಣವೆಂದರೆ ಅಕ್ಷರಗಳ ಅರಿವಲ್ಲ. ಅಕ್ಷರವಾದ ಮನುಷ್ಯತ್ವದ ಅರಿವು. ಕೇವಲ ಗ್ರಂಥ ಜ್ಞಾನದಿಂದ ಪ್ರಯೋಜನವಿಲ್ಲ. ಮಾಹಿತಿ ಸಂಗ್ರಹಣೆಯಾದ ಮಾತ್ರಕ್ಕೆ ಶಿಕ್ಷಣವಂತನೆನಿಸುವುದಿಲ್ಲ. ಸಂಪೂರ್ಣ ವ್ಯಕ್ತಿತ್ವವನ್ನು ಬೆಳೆಸುವ, ಶೀಲವನ್ನು ಸಂವರ್ಧಿಸುವ, ಸಮಾಜಮುಖಿಯಾಗಿ ನಡೆಯುವಂತಹ ಕಲಿಕೆಯನ್ನು ನೀಡುವುದೇ ಶಿಕ್ಷಣ. ವಿವಿಧ ಧರ್ಮಗಳಲ್ಲಿ, ವಿವಿಧ ಸಂಸ್ಕೃತಿಯಲ್ಲಿ, ಸಾಮರಸ್ಯವನ್ನುಂಟುಮಾಡುವ ಶಕ್ತಿ ಭಾರತೀಯ ಸಂಸ್ಕೃತಿಯದಾಗಿದೆ. ಇಲ್ಲಿನ ಉಪನಿಷತ್ತುಗಳು, ಭಗವದ್ಗೀತೆ, ವಚನ, ಕೀರ್ತನೆ, ಅನುಭಾವಗೀತೆಗಳು, ತತ್ವಪದಗಳು, ಭಜನೆಯ ಹಾಡುಗಳು, ಮಂಗಳಾರತಿ ಪದಗಳು, ಜನಪದ ಮುಕ್ತಕಗಳು, ಗಾದೆಗಳು, ನಂಬಿಕೆಗಳು, ಮನುಷ್ಯತ್ವವನ್ನು ಕಲಿಸಿಕೊಡುವ ಪವಿತ್ರ ಸಾಧನಗಳು. ವಿಜ್ಞಾನ, ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನ ಗಳನ್ನು ಮಾನವ ಇಂದು ಭೋಗಕ್ಕಾಗಿ, ಸ್ವಾರ್ಥಸಾಧನೆಗಾಗಿ, ವಿನಾಶಕ್ಕಾಗಿ ಬಳಸಿಕೊಳ್ಳುತ್ತಿರುವುದನ್ನು ಶಿಕ್ಷಣವೆನ್ನಲಾಗದು. ಶಿಕ್ಷಣ ವಿಕಾಸಾತ್ಮಕವಾದುದಾಗಬೇಕು. ಕೋಟ್ಯಾಂತರ ರೂಪಾಯಿಗಳನ್ನು ವೆಚ್ಚ ಮಾಡಿ 'ಬಾಂಬು' ತಯಾರಿಸುವ ವಿಜ್ಞಾನವನ್ನು ಹೇಗೆ ಶಿಕ್ಷಣವೆನ್ನಬಹುದು? ಶ್ರೀಗಳವರು (ತಗ್ಗಿಹಳ್ಳಿ ಶ್ರೀರಾಮ ಕೃಷ್ಣಾಶ್ರಮದ ಸ್ವಾಮಿ ರಮಾನಂದರು) ಹೇಳಿದಂತೆ ಇಂದಿನ ಯುವಜನಾಂಗ ಸಿನಿಮಾ ನಟರನ್ನು, ದೇಶಪ್ರೇಮವಿಲ್ಲದ ರಾಜಕಾರಣಿಗಳನ್ನು ಆದರ್ಶವಾಗಿಟ್ಟುಕೊಳ್ಳಬಾರದು. ಈ ರಾಷ್ಟ್ರದ ಮಹಾಪುರುಷರನ್ನು, ಋಷಿಮುನಿಗಳನ್ನು, ದೇಶ ಭಕ್ತರನ್ನು, ನೇಗಿಲ ಯೋಗಿಗಳನ್ನು ಆದರ್ಶವಾಗಿಟ್ಟುಕೊಳ್ಳುವ ಶಿಕ್ಷಣವಂತರಾಗಬೇಕು. ದುರ್ದೈವವೆಂದರೆ ಇಂದು ಎಲ್ಲರೂ ಶಿಕ್ಷಿತರೆನಿಸಿಕೊಂಡವರೂ ಸಹ ಹಣ ಸಂಪಾದನೆಯನ್ನು ಆದರ್ಶವಾಗಿಟ್ಟು ಕೊಂಡಿರುವುದು. ಹೇಗಾದರೂ ಹಣವಂತರಾಗಬೇಕು. ಹಣ ಗಳಿಕೆಗಾಗಿ ತತ್ವಗಳನ್ನು, ಮೌಲ್ಯಗಳನ್ನು ಗಾಳಿಗೆ ತೂರುತ್ತಿದ್ದಾರೆ. ಇದರಲ್ಲಿ ವರ್ಗ, ವರ್ಣ, ಲಿಂಗ, ಪ್ರಾಂತ್ಯ, ವಯಸ್ಸುಗಳ ಭೇದವಿಲ್ಲ. ಸರಳ ಜೀವನದ ಮಾತಿಲ್ಲ. ಇಂದಿನ ಮಕ್ಕಳನ್ನು ರಾಷ್ಟ್ರದ ಸಂಪತ್ತನ್ನಾಗಿ ರೂಪಿಸಬೇಕೆಂಬ ಹಂಬಲವಿಲ್ಲ. ಕಲಿತ ಮಕ್ಕಳು ಕಲ್ಪವೃಕ್ಷವಾಗುವಂತೆ ಬೆಳೆಸಬೇಕಾದ ತುರ್ತು ಇಂದು ಎಲ್ಲಕ್ಕಿಂತ ಮುಖ್ಯವಾದುದಾಗಿವೆ. ನಾವೊಂದು ಬೃಹತ್ ರಾಷ್ಟ್ರದ ಜವಾಬ್ದಾರಿಯುತ ಜನಾಂಗವೆಂಬ ಪ್ರಜ್ಞೆ ಯುವ ಜನತೆಯಲ್ಲಿ ಮೂಡಿ ಬರುವಂತೆ ಅವರನ್ನು ಶಿಕ್ಷಣವಂತರನ್ನಾಗಿಸಬೇಕಾಗಿದೆ. ಎಲ್ಲ ಯೋಜನೆಗಳು ಆ ದಿಶೆಯಲ್ಲಿ ಕಾರ್ಯಮುಖವಾಗಬೇಕು.*

*

# ಗ್ರಂಥ ಪ್ರಕಟಣೆ

ದಿನಾಂಕ ೧೨-೦೭-೨೦೦೮ ಮತ್ತು ೧೩-೦೭-೨೦೦೮ರಂದು ಶ್ರೀಮಠದಲ್ಲಿ ಶ್ರೀಗಳವರ ಶತಮಾನೋತ್ಸವ ಸಮಾರಂಭದ ಸಂದರ್ಭದಲ್ಲಿ ಪ್ರಕಟವಾಗಲಿರುವ ಗ್ರಂಥಗಳ ವಿವಿಧ ಸಮಿತಿಗಳ ಸಭೆ ನಡೆಯಿತು. ಯೋಜನೆಯ ಸರ್ವಾಧ್ಯಕ್ಷರಾದ ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ 'ಚಿತ್ರ ಜಂಗಮ' ಕೃತಿಯ ಸಂಪಾದಕರಾದ ಶ್ರೀ ಗೊ.ರು. ಚನ್ನಬಸಪ್ಪನವರು ಈವರೆಗೆ ಆಗಿರುವ ಪ್ರಗತಿ ಮತ್ತು ಕೃತಿಯ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು 'ಸಿದ್ಧಶೈಲ'- ಗುರುವಂದನಾ ಸಂಪುಟದ ರೂಪು ರೇಷೆಗಳನ್ನು ವಿವರಿಸಿದರು. ಡಾ॥ ಎಸ್.ಎಂ. ವೃಷಭೇಂದ್ರಸ್ವಾಮಿಯವರು ಜ್ಞಾನ ದಾಸೋಹ ಮಣಿಮಾಲೆಯ ೧೦೮ ಕೃತಿಗಳ ವೈವಿಧ್ಯತೆಯನ್ನು ಸಭೆಯ ಗಮನಕ್ಕೆ ತಂದರು. ಶ್ರೀ ಎನ್. ಬಸವಾರಾಧ್ಯರು 'ನೆನೆವಮನ' ಕೃತಿಯಲ್ಲಿರುವ ಹಳೆಯ ವಿದ್ಯಾರ್ಥಿಗಳ, ಅಭಿಮಾನಿಗಳು, ವಿವಿಧ ಪೂಜ್ಯ ಮಠಾಧೀಶರು, ಗಣ್ಯಮಾನ್ಯರು ವ್ಯಕ್ತಪಡಿಸಿರುವ ಶ್ರೀಗಳವರನ್ನು ಕುರಿತಾದ ಅನುಭವ, ಅಭಿಪ್ರಾಯ, ಅನಿಸಿಕೆಗಳನ್ನು ಸಭೆಯ ಗಮನಕ್ಕೆ ತಂದರು.

ಪರಮಪೂಜ್ಯ ಶ್ರೀಗಳವರ ಅನುಪಮ ವ್ಯಕ್ತಿತ್ವಕ್ಕೆ ಅಲಂಕರಿಸಬಹುದಾದ ಈ ಎಲ್ಲ ಗ್ರಂಥ ಪುಷ್ಪಗಳು ನಾಡಿನ ವಿದ್ವಜ್ಜನರ ಸಹಕಾರ, ಅಭಿಮಾನಗಳಿಂದ ಸಾಕಾರಗೊಳ್ಳುತ್ತಿವೆ. ಇಂತಹ ಅಪೂರ್ವ, ಅಮೂಲ್ಯ ಗ್ರಂಥಗಳು ನಾಡಿನ ಮನೆಮನೆಗಳಲ್ಲಿರಬೇಕು. ಮುಂದಿನ ಜನಾಂಗಕ್ಕೆ ಶ್ರೀಗಳವರ ಸೇವೆಯ ಅಗಾಧತೆಯ ಪರಿಚಯ ಅಕ್ಷರರೂಪದಲ್ಲಿ ಉಳಿದುಬರಬೇಕು ಎಂದು ಸಲಹೆ, ಸೂಚನೆ, ಮಾರ್ಗದರ್ಶನಗಳು ವ್ಯಕ್ತವಾದುವು.

ಇದೊಂದು ಸಿದ್ಧಗಂಗಾ ಪ್ಯಾಟ್ರನ್ ಪವಾಡವೇ ಆಗಿದೆ ಎಂಬುದಾಗಿ ಡಾ॥ ಪಂಚಾಕ್ಷರಿ ಹಿರೇಮಠ ಮತ್ತು ಡಾ॥ ವೃಷಭೇಂದ್ರಸ್ವಾಮಿಗಳು ಶ್ರೀಗಳವರ ಸಮ್ಮುಖದಲ್ಲಿ ಸಭೆಗೆ ಆಗಮಿಸಿದ್ದ ಸದಸ್ಯರೊಂದಿಗೆ ವಿನಂತಿಸಿಕೊಂಡರು.

ಪ್ರಕಟವಾಗಲಿರುವ ಎಲ್ಲ ಗ್ರಂಥಗಳು ಪ್ರಕಟಣ ಪೂರ್ವ ಬೆಲೆಗೆ ಆಸಕ್ತರಿಗೆ ದೊರೆಯುವ ಸೌಲಭ್ಯವನ್ನು ಕಲ್ಪಿಸಲಾಗಿದೆ.

– ಸಂಪಾದಕ





# ವಿಶ್ವಸಂಸ್ಕೃತಿಗೆ ವೀರಶೈವ ಸಂಸ್ಕೃತಿಯ ಕಾಣಿಕೆ

-ಪ್ರೊ. ಡಿ. ಜವರೇಗೌಡ, ಮಾಜಿ ಉಪ ಕುಲಪತಿಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

## ಪ್ರವೇಶ :

ಸಂಸ್ಕೃತಿ ಮತ್ತು ನಾಗರಿಕತೆಗಳು ಮೇಲುನೋಟಕ್ಕೆ ಒಂದೆ ಎಂದು ತೋರಬಹುದಾದರೂ, ಪರಸ್ಪರಾವಲಂಬಿಗಳಾದರೂ, ಅವು ತೀರ ಭಿನ್ನ ಹಾಗೂ ಪ್ರತ್ಯೇಕವೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಆಯುರ್ಮಾನದ ದೃಷ್ಟಿಯಿಂದ ನಾಗರಿಕತೆ ಪ್ರಾಚೀನವಾದದ್ದು, ಸಂಸ್ಕೃತಿ ಅರ್ವಾಚೀನವಾದದ್ದು. ಹಿಂದೆ ನಾಗರೀಕತೆಯಲ್ಲಿಯೇ ಸಂಸ್ಕೃತಿಯೂ ಅಡಕವಾಗಿತ್ತು. ನಗರದಿಂದ ನಾಗರೀಕತೆಯಾದಂತೆ, ಸಂಸ್ಕಾರದಿಂದ ಸಂಸ್ಕೃತಿಯಾಯಿತು, ಈ ಎರಡರ ಮೂಲ ಬೇರೆಯೆಂಬುದು ಅವುಗಳ ನಿಷ್ಪತ್ತಿಯಿಂದಲೇ ಸ್ಪಷ್ಟವಾಗುತ್ತದೆ. ಒಂದು ಬಾಹ್ಯಸೌಂದರ್ಯಕ್ಕೊಪ್ಪುವುದಾದರೆ, ಮತ್ತೊಂದು ಅಂತಸ್ಸೌಂದರ್ಯಕ್ಕೆ ಸಲ್ಲುತ್ತದೆ. ಮನುಷ್ಯನ ಸಾಧನೆ ಸಿದ್ಧಿಗಳಿಗೆ ಸಂಬಂಧಿಸಿದಂತೆ ಈ ಎರಡು ಪದಗಳನ್ನು ಬಳಸುವುದುಂಟಷ್ಟೆ. ಜಗತ್ತಿನ ಎಲ್ಲ ವಸ್ತುಗಳಂತೆ, ಅವುಗಳಿಗಿಂತ ಮಿಗಿಲಾಗಿ ಅವನಿಗೂ ಬಹಿರಂಗ ಹಾಗೂ ಅಂತರಂಗವೆಂಬ ಎರಡು ಮುಖಗಳುಂಟು. ನಿಸರ್ಗದ ಪರಿಪೂರ್ಣಾವಸ್ಥೆಯ ಕೆಳಗಿನ ಅವಸ್ಥೆಯೇ ಮಾನವ. ಸೃಷ್ಟಿಯಲ್ಲಿ ಅವನದು ಶಿಖರಸ್ಥಾನ. ಹೃದಯ ಮನಸ್ಸುಗಳೇ ಅವನ ಆ ಸ್ಥಾನಕ್ಕೆ ಕಾರಣ. ನಿಸರ್ಗ ಅವನಿಗೆ ನೀಡಿರುವ ಅತ್ಯದ್ಭುತ ವರಗಳವು. ಅವುಗಳಿಂದಾಗಿ ಅವನು ಸೃಷ್ಟಿಯ ಏಕಮೇವಾದ್ಭುತವಾಗಿ ಕಾಣಿಸಿಕೊಳ್ಳುತ್ತಾನೆ. ಅವುಗಳ ವಿಕಾಸವೇ ಸಂಸ್ಕೃತಿ; ಆ ಸಂಸ್ಕೃತಿಯ ಪ್ರತಿಫಲನ ಅಥವಾ ಬಾಹ್ಯರೂಪವೇ ನಾಗರಿಕತೆ.

'ಮಾನವನ ಊರ್ಧ್ವಗಮನದ ಸಾಹಸ ದ್ವಿಮುಖಿಯಾದದ್ದು; ನಾಗರಿಕತೆ ಮತ್ತು ಸಂಸ್ಕೃತಿ ಒಂದು ಬಹುರ್ಮುಖಿ, ಮತ್ತೊಂದು ಅಂತರ್ಮುಖಿ. ಆದರೆ ಅವುಗಳಿಗೆ ಪರಸ್ಪರ ವಿನಾಭಾವನೇನೂ ಇಲ್ಲ. ಒಂದರ ಪ್ರಭಾವಕ್ಕೆ ಮತ್ತೊಂದನ್ನು ರೂಪಿಸುವ ಶಕ್ತಿಯಿರುತ್ತದೆ. ಮಾನವಕುಲದ ಈ ಸಾಹಸವೇ ಋಷಿ, ಕವಿ, ಶಿಲ್ಪಿ, ಯೋಗಿ, ಪ್ರವಾದಿ, ಮಹಾತ್ಮ, ಆಚಾರ್ಯ, ಪರಮಹಂಸಾದಿ ವಿಭೂತಿ ಪುರುಷರನ್ನು ನಿರ್ಮಿಸಿದೆ. ಅಸಂಖ್ಯ ಮನಸ್ಸುಗಳ ಸಮಷ್ಟಿಯಲ್ಲಿ ಸಂಭವಿಸಿ, ಪ್ರಕಟವಾಗಿ, ಸಿದ್ಧವಾಗುವ ಒಂದು ದೇಶದ ಸಮಷ್ಟಿ ಮನಸ್ಸಿನ ಚಿತ್‌ಶಕ್ತಿಯ ರಸಗಂಗೆಯೇ ಆ ದೇಶದ ಸಂಸ್ಕೃತಿ. ಸಂಸ್ಕೃತಿ ಎಂಬ ಪದದ ಅರ್ಥವ್ಯಾಪ್ತಿ ವಿಸ್ತಾರವಾದದ್ದು. ಒಂದು ಮಾತಿನಲ್ಲಿಯೊ ವಾಕ್ಯದಲ್ಲಿಯೊ ಅದರ ದಿಗ್ದರ್ಶನ ಮಾಡುವುದು ಕಷ್ಟ. ಆದರೂ ಮನುಷ್ಯ ಚೇತನದ ಸರ್ವತೋಮುಖವೂ ವಿಕಾಸ -ಮಾನವೂ ಆದ ಆತ್ಮಶ್ರೀಯನ್ನು ಸಂಸ್ಕೃತಿ ಎಂದು ಸಂಕೇತಿಸಬಹುದು. ಸಂಸ್ಕೃತಿಯನ್ನು ಕುರಿತ ಕುವೆಂಪು ಅವರ ಈ ವ್ಯಾಖ್ಯಾನ ಸರ್ವಸಮರ್ಪಕವೆಂದೇ ಹೇಳಬಹುದು.

ಸಂಸ್ಕೃತಿಯ ಲಕ್ಷಣವನ್ನು ವಿವರಿಸುವಾಗ ಡಿವಿಜಿಯವರು ನೇತಿ ಮಾರ್ಗದ ಮೂಲಕ ಇತ್ಯರ್ಥಕ್ಕೆ ಬರುತ್ತಾರೆ. ಮೊದಲು ಅವರು ಮ್ಯಾಥ್ಯೂ ಅರ್ನಾಲ್ಡನ ಮಾತುಗಳನ್ನು ಉದ್ಧರಿಸುತ್ತಾರೆ; 'ಆಗರ್ಭ ಶ್ರೀಮಂತರಾದ ಅನಾಗರೀಕರು, ಧನಪರಾಯಣರಾದ ನೀರಸ ಜೀವಿಗಳು, ಅಹನ್ಯಹನಿ ಕಾಲಕ್ಷೇಪದ ಕಂಗಾಲಿ ಗುಂಪು-ಈ ಮೂರು ಇಂಗ್ಲೀಷ್ ಜನವರ್ಗ. ಈ ಮೂರು ಜನಸ್ಥಾನಗಳಲ್ಲಿ ಎಲ್ಲಿಯೂ ಸಂಸ್ಕೃತಿಯ ರಸಿಕತೆ ಇಲ್ಲವೆಂಬುದು ಬರಿಯ ವಿಧ್ಯೆಯಲ್ಲ; ಅದು ವಿದ್ಯಾಕುಸುಮದ ಪರಾಗ; ಸಂಸ್ಕೃತಿಯೆಂಬುದು ಪಾಂಡಿತ್ಯ ಮಾತ್ರವಲ್ಲ, ಅದು ಬರಿಯ ಜಾಣತನವೂ ಯುಕ್ತಿಯೂ ಅಲ್ಲ, ಸಂಗೀತ ಮೊದಲಾದ ಲಲಿತ ಕಲಾಭಿರುಚಿಯೂ ಅಲ್ಲ, ಒಳ್ಳೆಯ ವಾಗ್ಮಿತೆಯೂ ಅಲ್ಲ ಎಂದು ಹೇಳಿದ ನಂತರ, ಅದೊಂದು ಬುದ್ಧಿಯ ವ್ಯವಸಾಯ, ಮನಸ್ಸಿನ ಮೇಲ್ಮೆ, ಅಂತರಂಗ ಸಂಸ್ಕಾರ, ಒಳ್ಳೆಯದನ್ನು ಕಂಡುಕೊಳ್ಳುವ ಪ್ರಯತ್ನ, ನಡೆನುಡಿಗಳ ಚೊಕ್ಕಟ, ಜೀವನ ಸಂದರ್ಭಗಳ ಯುಕ್ತಾಯುಕ್ತ ವಿವೇಚನೆ, ಅದೊಂದು ನೀತಿನಯ ಕುಶಲತೆ, ಅದೊಂದು ಗುಣ ಸಮೃದ್ಧಿ, ಉತ್ಕೃಷ್ಟ ಜೀವನ, ಜೀವನಮೌಲ್ಯ, ಆತ್ಮಶಿಕ್ಷಣ' ಎಂದು ಸುದೀರ್ಘವಾಗಿ ವಿವರಿಸುತ್ತಾರೆ.

ಮಾನವನ ನಿರಾತಂಕವಾದ ಜೀವನಕ್ಕೆ ಸುಖ ಸೌಕರ್ಯಗಳನ್ನು ಕಲ್ಪಿಸುವ ಉದಾಹರಣೆಗೆ ವಾಹನ ಸೌಕರ್ಯ, ವಿದ್ಯುತ್ ಸೌಕರ್ಯ, ಔಷಧಿ ಸೌಕರ್ಯ ಇತ್ಯಾದಿ ಸಹಸ್ರ ಸಹಸ್ರ ಸೌಕರ್ಯಗಳನ್ನು-ವೈಜ್ಞಾನಿಕ ಹಾಗೂ ತಾಂತ್ರಿಕ ಸಂಶೋಧನೆಗಳನ್ನು – ನಾಗರಿಕತೆಯೆಂದೂ, ಪುರುಷಾರ್ಥಸಿದ್ಧಿಯ ಕಡೆಗೆ, ವಿವೇಕ ಸಂಯಮಗಳ ಕಡೆಗೆ, ಸಚ್ಚಿದಾನಂದ ಸಿದ್ಧಿಯ ಕಡೆಗೆ

ಮಾನವನನ್ನು ಪ್ರೇರಿಸಿ, ಅವನನ್ನು ಊರ್ಧ್ವಮುಖವಾಗಿ ಕೊಂಡೊಯ್ಯುವ ಆತ್ಮಶ್ರೀ ಪ್ರಧಾನವಾದ ಸಾಹಿತ್ಯ ಸಂಗೀತಾದಿ ಕಲೆಗಳನ್ನು, ಧಾರ್ಮಿಕ ಸಾಧನೆ ಸಿದ್ಧಿಗಳನ್ನು ಸಂಸ್ಕೃತಿಯೆಂದೂ ಮೇಲಣ ನಿದರ್ಶನಗಳಿಂದ ತಿಳಿಯಬಹುದು.

ಈ ಸಂಸ್ಕೃತಿ ಮಾನವರಲ್ಲಿ ಮೈದೋರುವ ಬಗೆಯನ್ನು ಶ್ರೀರಾಮಾಯಣ ದರ್ಶನಂ ಮಹಾಕಾವ್ಯದ ಶ್ರೀರಾಮಚಂದ್ರನ ಪಾತ್ರಚಿತ್ರಣದಲ್ಲಿ ಕಾಣಬಹುದು;

*ಶ್ರೀರಾಮನಾಹ್ಲಾದರೂಪಿ, ಔದಾರ್ಯನಿಧಿ,*
*ನಿರಸೂಯೆಯಿಂ ಸರ್ವರನುರಾಗ ಭಾಜನಂ*
*ಕಲಿ, ಮತ್ಸರವಿದೂರನತ್ಯಂತ ಶಾಂತಿಖನಿ.*
*ಪ್ರಿಯಭಾಷಿ, ಹಿತಸುಖಿಂ, ಮಿತಮಾರ್ಗಿ, ಧೀರವಶಿ.*
*ನಗೆಮೊಗದ ಸಂಯಮಿ, ಕೃತಜ್ಞತಾಮೂರ್ತಿ, ಮೇಣ್*
*ಜ್ಞಾನಿ, ಸಜ್ಜನಪ್ರೇಮಿ, ಸೂಕ್ಷ್ಮಮತಿ, ಪಂಡಿತಂ*
*ಶ್ರುತಿವಿದಂ; ಸುವಿಚಾರಿ; ನಿತ್ಯಂ ಪ್ರಜಾಪ್ರೇಮಿ!*
*ಸುಸ್ಥಿರಂ; ಸಂಬುದ್ಧ ಪ್ರಜ್ಞಾಮಹೇಶ್ವರಂ !*
*ಶಸ್ತ್ರಶಾಸ್ತ್ರ ವಿದ್ಯಾಪ್ರವೀಣ ರಣಪಂಡಿತಂ.*
*ನವನವೋತ್ಮೇಷಿತಂ ನಿತ್ಯ ಚಿರನೂತನಂ*
*ರಸದರ್ಶನಾಸ್ವಾದನಂಗೈವ ಸಹಜಕವಿ.*
*ಶ್ರುತಿಶಾಸ್ತ್ರ ಕಾವ್ಯ ರಸಋಷಿ; ಯೋಗಿ.*

ಸಕಲ ಸದ್ಗುಣಭರಿತನೇ ಸುಸಂಸ್ಕೃತ, ಅವನೇ ಕಲ್ಯಾಣ ಪುರುಷ, ಅವನೇ ವಿಶ್ವಸಂಸ್ಕೃತಿಯ ಪ್ರತೀಕನೆಂಬುದು ಮೇಲಣ ವಾಕ್ಯಗಳಿಂದ ಸುಸ್ಪಷ್ಟವಾಗುತ್ತದೆ.

ವೇದೋಪನಿಷತ್ ಜೆಂಡ್ ಅವೆಸ್ತ ಬೈಬಲ್ ಕೊರಾನ್ ತ್ರಿಪಿಟಿಕ ಮಹಾಕಾವ್ಯಾದಿ ಗ್ರಂಥಗಳಲ್ಲಿ ಸಾಂಸ್ಕೃತಿಕ ಪ್ರತಿಮೆಗಳು ವಿಪುಲವಾಗಿ ದೊರೆಯುತ್ತವೆ. ಭಗವದ್ಗೀತೆಯಲ್ಲಿ ಬರುವ ಸ್ಥಿತಪ್ರಜ್ಞನ ಲಕ್ಷಣ ಹಾಗೂ ಸಂಸ್ಕೃತಿಯ ಲಕ್ಷಣಗಳು ವಿಭಿನ್ನವಲ್ಲ.

*ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ*
*ವೀತರಾಗ ಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ*

ಇಲ್ಲಿ ಉಕ್ತವಾಗಿರುವ ಲಕ್ಷಣಗಳು ಸುಸಂಸ್ಕೃತನ ಲಕ್ಷಣಗಳೇ ಆಗಿವೆ.

ವಿಧಿಯಿಚ್ಛೆಯನ್ನು ಮೀರಬೇಡ, ಪಿತೃಋಣವನ್ನು ಮರೆಯಬೇಡ, ರಾಷ್ಟ್ರದ ಶಾಸನಗಳನ್ನು ಉಲ್ಲಂಘಿಸಬೇಡ, ಜಗತ್ತೊಂದು ಕುಟುಂಬವೆಂಬುದನ್ನು ಮರೆಯಬೇಡ, ಮನುಷ್ಯನ ಸಾಹಸಕ್ಕೆ ಮೇರೆಯಿದೆಯೆಂಬುದನ್ನು ಮರೆಯಬೇಡ, ಎಂಥ ಸಂದರ್ಭದಲ್ಲಿಯೂ ಕೋಪಿಸಿಕೊಳ್ಳಬೇಡ, ಸೋಮಾರಿಯಾಗಿರಬೇಡ, ಶಿಕ್ಷಣಕ್ಕೆ ಕೆಟ್ಟ ಹೆಸರು ತರಬೇಡ–ಇದು ಷಿಂಟೋಧರ್ಮ ಮಾನವನಿಗೆ ವಿಧಿಸಿರುವ ಕೆಲವು ಕರ್ತವ್ಯಗಳು. ಇವುಗಳ ಆಚರಣೆಯಿಂದ ಸಂಸ್ಕೃತಿಯ ಕುಸುಮವರಳಿ, ಪರಾಗ ಬೀರುತ್ತದೆ.

ಯಾವಾಗಲೂ ಉದ್ಯೋಗಶೀಲನಾಗಿರು, ಸಂಯಮಿಯಾಗಿರು; ದುಡಿದು ತಿನ್ನು; ದುಡಿದದ್ದರಲ್ಲೊಂದು ಭಾಗವನ್ನು ದೇವರಿಗೂ ಸಾಧುಗಳಿಗೂ ಹಂಚು; ಸದಾಲೋಚನೆ, ಸತ್ಕ್ರಿಯೆ, ಸತ್ಸಲ್ಲಾಪಗಳೇ ಶ್ರೇಯಸ್ಸಿಗೆ ಸೋಪಾನಗಳು; ಸಾಧುಸಂತರನ್ನು ಆರಾಧಿಸಬೇಕು; ನಿನಗೆ ಬೇಡವಾದ್ದನ್ನು ಇತರರಿಂದ ನಿರೀಕ್ಷಿಸಬೇಡ; ಇತರರನ್ನು ಕೊಳ್ಳೆ ಹೊಡೆದು ಗಳಿಸಿದ ಸಂಪತ್ತಿಗಿಂತ, ಪ್ರಾಮಾಣಿಕತೆಯಿಂದ ಕೂಡಿದ ದಾರಿದ್ರ್ಯವೇ ಶ್ರೇಷ್ಠ ಭೌತಿಕ ಶ್ರೀಮಂತಿಕೆಗಿಂತ ಬೌದ್ಧಿಕ ಶ್ರೀಮಂತಿಕೆ ಅತ್ಯುತ್ಕೃಷ್ಟವಾದದ್ದು– ಇವು ಜೋರಾಷ್ಟ್ರಿಯನ್ ಧರ್ಮದ ಆಧಾರ ತತ್ವಗಳು.

ಲೋಕ ವ್ಯಾಮೋಹವೂ ಬೇಡ, ವೀರ ವೈರಾಗ್ಯವೂ ಬೇಡ; ಮಧ್ಯಮಾರ್ಗ ಹಿಡಿ, ಸಕಲ ವಿಪತ್ತುಗಳಿಗೆ ಆಶೆಯೇ ಮೂಲ; ಸಮ್ಯಕ್‌ಜ್ಞಾನ, ಸಮ್ಯಕ್‌ದರ್ಶನ, ಸಮ್ಯಕ್‌ಚಾರಿತ್ರ, ಸಮ್ಯಕ್‌ಜೀವನ ಮೊದಲಾದ ಮಾರ್ಗಗಳ ಮೂಲಕ ಆಶೆಯನ್ನು ವಿನಾಶಗೈಯ್ಯಬಹುದು. ಇತರರ ಸುಖದುಃಖಗಳಲ್ಲಿ ಸಮಭಾಗಿಯಾಗು. ಸುಖ ದುಃಖಗಳೆರಡರಲ್ಲಿಯೂ ಉದ್ವಿಗ್ನತೆ ಸಲ್ಲದು. ಸರ್ವಭೂತಗಳನ್ನು ಪ್ರೀತಿಸು. ಸಮದರ್ಶನವೇ ಲೋಕಕಲ್ಯಾಣಕ್ಕೆ ದಾರಿ. ತ್ಯಾಗದಿಂದ ಆತ್ಮಕಲ್ಯಾಣಕ್ಕೆ ದಾರಿ. ತ್ಯಾಗದಿಂದ ಆತ್ಮಕಲ್ಯಾಣ ಮಾತ್ರವಲ್ಲ. ಜಗತ್ತಿನ ಹಿತಸಾಧನೆ ಸಾಧ್ಯ., ಬುದ್ಧನ ಈ ಉಪದೇಶದಲ್ಲಿ ಸಂಸ್ಕೃತಿಯ ಬೀಜಗಳು ಹುದುಗಿವೆಯೆಂಬುದು ಸುಸ್ಪಷ್ಟ

ಶುದ್ಧ ನಿರ್ವ್ಯಾಜ್ಯಪ್ರೇಮದ ಆಧಾರದ ಮೇಲೆ ಕ್ರಿಶ್ಚಿಯನ್ ಧರ್ಮ ನಿಂತಿದೆ. ಶತ್ರುವನ್ನು ಪ್ರೀತಿಸಬೇಕೆಂಬುದು ಅಲ್ಲಿ ಕಾಣುವ ಉಚ್ಚ ಸಂಸ್ಕೃತಿಯ ಲಕ್ಷಣ. ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆಯೊಡ್ಡು ಎನ್ನುವುದು ಕ್ರಿಸ್ತನ ಬೋಧೆ. ದೇವನೊಬ್ಬ; ಅವನ ಮಗ ಯೇಸು; ಅವನ ಪವಿತ್ರಾತ್ಮ ಸಕಲ ಜೀವಿಗಳಲ್ಲಿಯೂ ಅಡಗಿದೆ. ಭಿಕ್ಷೆ ನೀಡು. ಮಾನವನ ಜೀವಿಕೆಗೆ ರೊಟ್ಟಿಯೊಂದೇ ಸಾಲದು. ಹಬ್ಬದ ದಿನ ಬಡವರಿಗೂ ಅಂಗವಿಕಲರಿಗೂ ಹಂಚು, ಒಂದೇ ಜನ್ಮದಲ್ಲಿ ಮನುಷ್ಯ ಮುಕ್ತಿಯನ್ನು ಸಂಪಾದಿಸಬೇಕು. ಮನುಷ್ಯ ಭೂಮಿಗೆ ಬರುವಾಗ ಏನನ್ನೂ ತರಲಿಲ್ಲ,





ಹೋಗುವಾಗ ಏನನ್ನೂ ಕೊಂಡೊಯ್ಯುವುದಿಲ್ಲ. ಸೂಜಿಯ ಕಣ್ಣಲ್ಲಿ ಒಂಟೆ ನುಗ್ಗುವುದೆಷ್ಟು ನಿಜವೋ ಶ್ರೀಮಂತನಿಗೆ ಸ್ವರ್ಗಲಾಭವೂ ಅಷ್ಟೇ ನಿಜ.

ಅಲ್ಲಾ ಒಬ್ಬನೇ ಪರಮಪ್ರಭು, ಮಹಮ್ಮದ್ ಅವನ ಪ್ರವಾದಿ. ದೇವರು ನಿರಾಕಾರ, ಅನಾದಿ, ಅನಂತ. ದುಡಿಮೆಯಿಂದ ಬದುಕ ಸಾಗಿಸಬೇಕು. ಸರಳ ಜೀವನ ನಡೆಸಬೇಕು. ಕೊಲೆ ಕಳವು ಕಾಮಲಾಲಸೆ ಭೋಗಲೋಲುಪತೆ ಮದ್ಯ ಸೇವನೆಗಳನ್ನು ತೊರೆದು ಕಠಿಣ ಜೀವನ ನಡೆಸಬೇಕು. ದರಿದ್ರರ ಬಗ್ಗೆ ಔದಾರ್ಯದಿಂದಿರಬೇಕು. ಪ್ರಾರ್ಥನೆ, ದಾನ ಉಪವಾಸ ಮತ್ತು ಮೆಕ್ಕಾ ಯಾತ್ರೆಗಳ ಮೂಲಕ ಮನುಷ್ಯ ವಿಮೋಚನೆಗಳನ್ನು ಗಳಿಸಬಹುದು. ಈ ನೀತಿ ಸೂತ್ರಗಳಲ್ಲಿ ಇಸ್ಲಾಂ ಸಂಸ್ಕೃತಿಯ ಬೇರುಗಳು ಚಾಚಿಕೊಂಡಿವೆ.

ಮಾನವ ಜೀವನದ ಪ್ರತಿಯೊಂದು ವ್ಯವಹಾರದಲ್ಲಿಯೂ ಸಂಸ್ಕೃತಿಯ ಹೊಳಹುಗಳನ್ನು ಕಾಣಬಹುದಾದರೂ, ಅವು ಧರ್ಮಕಾವ್ಯ ಸಂಗೀತಾದಿ ಮಾಧ್ಯಮಗಳಲ್ಲಿ ಸಾಂದ್ರವಾಗಿವೆಯೆಂಬುದನ್ನೊಪ್ಪಿಕೊಳ್ಳಲೇಬೇಕು. ಮನುಷ್ಯನ ಬದುಕನ್ನು ಅವನ ದೇಹ ಮನಸ್ಸು ಹೃದಯಗಳನ್ನು ತಿದ್ದಿ, ರೂಪಿಸಿ, ಹಸನುಗೊಳಿಸುವುದೇ ಪ್ರತಿಯೊಂದು ಧರ್ಮದ ಪ್ರಧಾನೋದ್ದೇಶ. ಪ್ರಾರ್ಥನೆ, ಆತ್ಮಸಂಯಮ ಮತ್ತು ಧ್ಯಾನಗಳು ಜೀವಾತ್ಮ ವಿಶ್ವಾತ್ಮಗಳ ಏಕತೆಯನ್ನು ಸಾಧಿಸಿ, ಮಾನವನ ಪೂರ್ಣ ವ್ಯಕ್ತಿತ್ವದ ವಿಕಸನಕ್ಕೆ ಕಾರಣವಾಗುತ್ತದೆ. ಸತ್ಯಕ್ಕಿಂತ ಹಿರಿದಾದ ಮತವಿಲ್ಲ; ಸತ್ಯಾನ್ವೇಷಣೆಯ ಮಾರ್ಗಗಳಲ್ಲಿ ಮತವೂ ಒಂದು. ಬೆಳಕಿನ ಕಡೆಗೆ, ಒಳಿತಿನ ಕಡೆಗೆ, ಪರಹಿತದ ಕಡೆಗೆ, ವಿಶ್ವಪ್ರಜ್ಞೆಯ ಕಡೆಗೆ ಮನುಷ್ಯನನ್ನು ತಿರುಗಿಸುವ ಮತವೇ ಶ್ರೇಷ್ಠ ಮತ. ಅಂಥ ಮತ ಹೊರಗಿನಿಂದ ಪಡೆಯುವಂಥದ್ದಲ್ಲ, ಒಳಗೆ ವಿಕಾಸಗೊಳ್ಳುವ ಆತ್ಮಪ್ರಜ್ಞೆ, ಸುಜ್ಞಾನ ಜ್ಯೋತಿ ಅದು ವಿಜ್ಞಾನಕ್ಕೆ ವಿಚಾರಕ್ಕೆ ವಿರೋಧಿಯಲ್ಲ; ಅವನ್ನು ಬೆಳಗುವ ವಿಶಿಷ್ಟ ಪ್ರಭಾವಶಕ್ತಿಯದು.

ಪ್ರತಿಯೊಬ್ಬ ಮಾನವನಲ್ಲಿಯೂ ದೇವಾಂಶವಿದೆಯೆಂದು ಸರ್ವೇ ಸಮಾನ್ಯವಾಗಿ ಸಕಲ ಮತಗಳೂ ಒಪ್ಪಿಕೊಳ್ಳುತ್ತವೆ. ಆದ್ದರಿಂದ ನಿಜವಾದ ಮತೀಯ ಜೀವನ ಮನುಕುಲ ಪ್ರೇಮದ ಮೂಲಕ ಅಭಿವ್ಯಕ್ತಗೊಳ್ಳಬೇಕು. ಅನುಷ್ಠಾನದಲ್ಲಿ ಪರಿಣಾಮಗೊಳ್ಳದ ತತ್ವ, ನಾಯಿಯ ಹಾಲಿಗೆಣೆಯಾಗುತ್ತದೆ. ಮತದ ನೆಲಗಟ್ಟು ನೀತಿ. ನೀತಿ ಮತಗಳೆರಡೂ ಪರಸ್ಪರ ಬದ್ಧವೆಂದೂ, ಬಿತ್ತಿದ ಬೀಜಕ್ಕೆಂತು ನೀರು ಅಗತ್ಯವೋ ಅಂತೆಯೇ ಮತಕ್ಕೆ ನೀತಿ ಅಗತ್ಯವೆಂದೂ, ಇವೆರಡರ ಸಂಗಮಸ್ಥಾನವೇ ಸಂಸ್ಕೃತಿಯೆಂದೂ ಗಾಂಧೀಜಿ ಅಭಿಪ್ರಾಯಪಡುತ್ತಾರೆ. ಸತ್ಯ, ಸೌಂದರ್ಯ, ಸಾಹಸ, ಕಲೆ ಮತ್ತು ಶಾಂತಿಗಳು ಅಭಿವ್ಯಕ್ತಗೊಳ್ಳುವ ಜೀವನ ವ್ಯವಸ್ಥೆಯಲ್ಲಿ ಸಂಸ್ಕೃತಿ ಹಾಸುಹೊಕ್ಕಾಗಿರುತ್ತ ದೆಂದು ಧಾರಾಳವಾಗಿ ಹೇಳಬಹುದು. ಮನೆಯಿಂದ ಮನೆಗೆ, ಊರಿಂದೂರಿಗೆ, ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ ನಾಗರಿಕತೆಯೂ ವ್ಯತ್ಯಾಸಗೊಳ್ಳಬಹುದು; ಆದರೆ ಸಂಸ್ಕೃತಿಯು ಕಲ್ಪನೆಯಾಗಲಿ, ಸಂಸ್ಕೃತಿಯಾಗಲಿ ವ್ಯತ್ಯಾಸ ಹೊಂದದೆ ಕಾಲದೇಶಾತೀತವಾಗಿ, ಶಾಶ್ವತವಾಗಿ ನಿಲ್ಲುತ್ತವೆ. ದೇಹಕ್ಕೆ ಮುಪ್ಪೇ ಹೊರತು ಆತ್ಮಕ್ಕಲ್ಲ. ಗ್ರೀಕ್ ನಾಗರಿಕತೆ ಎಂದೋ ಅಳಿಯಿತು; ಅದರ ಪರಾಗದಂತಿರುವ ಸಂಸ್ಕೃತಿ ಮಾತ್ರ ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್‌ರ ಸಿದ್ಧಾಂತ ಭಾವನೆಗಳ ಮೂಲಕ ಇಂದಿಗೂ ಜಗತ್ತಿಗೆ ಮಾದರಿಯಾಗುಳಿದಿದೆ. ಆ ಭಾವನೆ ಸಿದ್ಧಾಂತಗಳು ಗ್ರೀಕ್ ದೇಶ ವಿಶ್ವಸಂಸ್ಕೃತಿಗೆ ನೀಡಿರುವ ಅಮೂಲ್ಯ ಶಾಶ್ವತ ಕಾಣಿಕೆಗಳು.

ಸರ್ವಚೇತನವಾದದಿಂದ ಪಾಶ್ಚಾತ್ಯ ತತ್ವಚಿಂತನೆ ಪ್ರಾರಂಭವಾಗುತ್ತದೆ. ಸೃಷ್ಟಿ ಮೂಲವನ್ನು ಕಂಡುಹಿಡಿಯಲು ಅವರು ಪ್ರಯತ್ನಿಸುತ್ತಾರೆ. ಸಮಾಜೋನ್ನತಿಗೆ ನೈತಿಕ ಮೌಲ್ಯಗಳ ರಕ್ಷಣೆ ಮತ್ತು ಪಾಲನೆ ಅತ್ಯವಶ್ಯವೆಂದು ಪೈಥಾಗೊರಾಸ್ ಸಾರುತ್ತಾನೆ. ಕೆಲವು ತಾತ್ವಿಕರ ಚಿಂತನೆ ಅದ್ವೈತವನ್ನು ಹೋಲುವುದಾರೆ, ಮತ್ತೆ ಕೆಲವರದು ಬೌದ್ಧ ದರ್ಶನದ ಸಮೀಪಕ್ಕೆ ಬರುತ್ತದೆ. ಡೆಮಾಕ್ರೈಟಿಸ್ ಮೊದಲಾದವರು ವೈಶೇಷಿಕರಂತೆ ಪರಮಾಣು ವಾದವನ್ನು ಪ್ರತಿಪಾದಿಸುತ್ತಾನೆ. ಜೈನದರ್ಶನವೂ ಅದಕ್ಕೆ ಹತ್ತಿರವಾಗಿದೆ. ಸೊಫಿಸ್ಟರದು ಮಾನವ ಕೇಂದ್ರವಾದ; ಅದರ ಪ್ರಕಾರ ದೇವರು ಧರ್ಮಗಳಿಗೆ ನೆಲೆಯಿಲ್ಲವಾಯಿತು. ಸೇಂದ್ರಿಯಾನುಭವವೇ ಜ್ಞಾನವಾಯಿತು. ನಾಸ್ತಿಕರಂತೆ ಸೊಫಿಸ್ಟರು ವಿಚಾರಕ್ರಾಂತಿಯ ಬೆಳವಣಿಗೆಗೆ ಸಹಾಯಕರಾದರು. ಜ್ಞಾನವೇ ಸದ್ಗುಣವೆಂದು, ಸದ್ಗುಣವೇ ಜ್ಞಾನವೆಂದು, ಆತ್ಮಜ್ಞಾನವೇ ಸರ್ವಶ್ರೇಷ್ಠವೆಂದು, ಆತ್ಮ ಅಗೋಚರವೆಂದು, ದೇಹ ಭೌತಿಕವೆಂದು ಸಾಕ್ರಟೀಸ್ ಬೋಧಿಸುತ್ತನೆ. ವಿಚಾರವೇ ಮೂಲಭೂತ ಸತ್ಯ, ವಸ್ತು ಅಸ್ವತಂತ್ರ ತತ್ವ ಎಂಬ ಆದರ್ಶವಾದವನ್ನು ಎತ್ತಿ ಹಿಡಿದ ಪ್ಲೇಟೋವಿನ ದೃಷ್ಟಿಯಲ್ಲಿ ಸೇಂದ್ರಿಯಾನುಭವಕ್ಕಿಂತ, ಬುದ್ಧಿಗಮ್ಯ ಜ್ಞಾನವೇ ಶ್ರೇಷ್ಠ; ದೇವರು ಸಾಕಾರನಲ್ಲ, ನಿರಾಕಾರ; ಆತ್ಮ ಅವಿನಾಶಿ, ಶರೀರಕ್ಕೆ ಜನನ ಮರಣಗಳುಂಟು; ನೈತಿಕ ಜೀವನವೇ

ಅತ್ಯುತ್ಕೃಷ್ಟವಾದುದು. ಸಾಂಖ್ಯದ ಕಪಿಲ ಋಷಿಯಂತೆ ಮಹಾ ಮೇಧಾವಿಯಾದ ಅರಿಸ್ಟಾಟಲ್ ಕಾರ್ಯ ಕಾರಣವಾದಿ; ಇಂದ್ರಿಯ ಪ್ರಪಂಚದ ಬಗ್ಗೆ ಅವನಿಗೆ ದ್ವೇಷವಿಲ್ಲ; ವಿಶ್ವವಿಕಾಸ ವಾದದ ಪ್ರವರ್ತಕನವನು; ತರ್ಕಕ್ಕೆ ಚಿಂತನೆ, ತತ್ವಕ್ಕೆ ತರ್ಕ ಆಧಾರವೆಂದವನು ಸ್ಪಷ್ಟಪಡಿಸುತ್ತಾನೆ; ಅವನ ಪರಿಕಲ್ಪನೆಯ ದ್ರವ್ಯರೂಪಗಳು ಸಾಂಖ್ಯರ ಪುರುಷ ಪ್ರಕೃತಿಗಳನ್ನು ಹೋಲುತ್ತವೆಂದು ಹೇಳುವುದುಂಟು; ಯಾರಿಗೂ ಸ್ವಂತ ಆಸ್ತಿ ಇರಕೂಡದು. ಹೆಂಗಸರು ಮಕ್ಕಳು ಎಲ್ಲ ಗಂಡಸರಿಗೂ ಸೇರಿದವರು ಎಂಬ ಪ್ಲೇಟೋವಿನ ಸಮತಾವಾದ ನೈತಿಕ ಅಧಃಪತನದ ಸಂಕೇತವೆಂದವನು ಟೀಕಿಸುತ್ತಾನೆ. ಚಾರ್ವಾಕರು ಸಂಪೂರ್ಣ ಭೌತವಾದಿಗಳಾದರೆ, ಎಪಿಕ್ಯೂರಿ ಯನ್ನರು ದೇವರ ಅಸ್ತಿತ್ವವನ್ನೂ, ನೀತಿಗೆ ವಿರೋಧವಲ್ಲದ ಸುಖಜೀವನವನ್ನೂ ಒಪ್ಪಿಕೊಳ್ಳುವ ಭೌತವಾದಿಗಳು, ದೈವೀ ನಿಯಮಕ್ಕನುಗುಣವಾಗಿ ಜಗತ್ತು ನಡೆಯುತ್ತದೆಂದು, ಮನುಷ್ಯ ಕರ್ತವ್ಯ ಚ್ಯುತನಾಗದೆ ತನ್ನ ಪಾಲಿಗೆ ಬಂದದ್ದನ ನುಭವಿಸಬೇಕೆಂದು, ಅರಿಷಡ್ವರ್ಗಗಳನ್ನು ಗೆಲ್ಲಬೇಕೆಂದು ಸ್ಟೋಯಿಕರು ಬೋಧಿಸುತ್ತಾರೆ. ಗೀತೆಯ ನಿಷ್ಕಾಮಕರ್ಮ ಯೋಗ ದೊಡನೆ ಸ್ಟೋಯಿಕರ ಉಪದೇಶವನ್ನು ಹೋಲಿಸುವು ದುಂಟು, ವ್ಯಕ್ತಿನಿಷ್ಠವಾದದ ವಿಪರೀತಾವಸ್ಥೆಯೇ ಸಂದೇಹ ವಾದ. ನವ್ಯ ಪ್ಲೇಟೋ ಸಿದ್ಧಾಂತದಲ್ಲಿ ಅನುಭಾವಕ್ಕೆ ಒತ್ತು. ಇಷ್ಟು ಪ್ರಾಚೀನ, ಪಾಶ್ಚಾತ್ಯ ತಾತ್ವಿಕ ಚಿಂತನೆಯ ಸ್ವರೂಪ.

ಇಸ್ಲಾಂ ಮತ್ತು ಕ್ರೈಸ್ತ ಮತಗಳ ಪ್ರೇರಣೆಯ ಫಲವಾಗಿ ಮಧ್ಯಕಾಲೀನ ತಾತ್ವಿಕ ಚಿಂತನೆ ವಿಕಾಸಗೊಂಡಿತೆಂದು ಹೇಳ ಬಹುದು. ಈ ಚಿಂತನೆಯ ಪ್ರಕಾರ ಬುದ್ಧಿಗಿಂತ ನಂಬಿಕೆಗೆ ಹೆಚ್ಚು ಪ್ರಾಧಾನ್ಯ. ಮುಖತ್ರಯ, ದೈವಾನುಗ್ರಹ ಮತ್ತು ಪಾಪ ನಿವೇದನೆ ಕ್ರೈಸ್ತ ಧರ್ಮದ ಮೂಲ ತತ್ವಗಳು. ಕ್ರೈಸ್ತ ಧರ್ಮದ ನಂಬಿಕೆಗಳಿಗೆ ತಾತ್ವಿಕ ವಿವರಣೆ ನೀಡುವಾಗ ಸಂತ ಅಗಸ್ಟೈನ್ ಮತ್ತು ಸಂತ ಅಕ್ವಿನಾಸ್‌ರು ಪ್ಲೇಟೋ ಮತ್ತು ಅರಿಸ್ಟಾಟಲ್‌ರ ಸಿದ್ಧಾಂತಗಳನ್ನು ಬಳಸಿಕೊಳ್ಳುತ್ತಾರೆ.

ವೈಜ್ಞಾನಿಕ ಮನೋಧರ್ಮ ಆಧುನಿಕ ಪಾಶ್ಚಾತ್ಯ ಚಿಂತನೆಯ ಅಡಿಗಲ್ಲೆನ್ನಬಹುದು. ಬುದ್ಧಿ, ಇಂದ್ರಿಯಾನುಭವ ಮತ್ತು ವಿಮರ್ಶೆಗಳ ಒರೆಗಲ್ಲಿನಲ್ಲಿ ಯಾವುದು ತೇರ್ಗಡೆಯಾಗುತ್ತದೆಯೋ ಅದೇ ಸತ್ಯ. ಪರಮಪ್ರಮಾಣ ಎಂಬುದು ಆಧುನಿಕ ತತ್ವಶಾಸ್ತ್ರಜ್ಞರ ಮತ. ಇಂದ್ರಿಯಾನುಭವವಲ್ಲದ, ಆಂತರಿಕ ಮೂಲಗಳಿಂದ ಹೊರಹೊಮ್ಮಿದ, ಸ್ವತಃ ಸಿದ್ಧವಾದ, ಬುದ್ಧಿಪ್ರಧಾನವಾದ ಜ್ಞಾನವೇ ಶುದ್ಧ ಬುದ್ಧಿಯೆಂಬುದು ಡೆಕಾರ್ಟ್ ಮೊದಲಾದ ಬುದ್ಧಿ ಪ್ರಾಧಾನ್ಯವಾದಿಗಳ ಅಭಿಪ್ರಾಯ. ಸ್ವತಃಸಿದ್ಧವಾದ ತತ್ವ ಹಾಗೂ ತರ್ಕಗಳ ಮೂಲಕ ಮತೀಯ ಸಂಗತಿಗಳನ್ನು ಪರೀಕ್ಷಿಸಬೇಕೆಂಬುದು ಅವನ ವಾದ; ಗಣಿತಮಾರ್ಗವನ್ನವನು ತತ್ವಶಾಸ್ತ್ರಕ್ಕನ್ವಯಿಸುತ್ತಾನೆ; ಮನಸ್ಸು ಮತ್ತು ದೇಹಗಳು ಪ್ರತ್ಯೇಕ ದ್ರವ್ಯಗಳೆಂದು ಕರೆಯುತ್ತಾನೆ. ವಿಶ್ವ ಬೇರೆಯಲ್ಲ, ದೇವರು ಬೇರೆಯಲ್ಲ. ಅವನು ಅಂತರ್ಯಾಮಿಯೇ ಹೊರತು ಅತೀತನಲ್ಲ, ಪ್ರತ್ಯೇಕವಾದ ಸೃಷ್ಟಿಯೆಂಬುದಿಲ್ಲ ಎಂಬ ವಿಶ್ವವಾದವನ್ನು ಮಂಡಿಸಿದವನು ಸ್ಪಿನೋಸ; ಮನುಷ್ಯನಿಗೆ ಇಚ್ಛಾಸ್ವಾತಂತ್ರವಿಲ್ಲ, ಎಲ್ಲ ವ್ಯಾಪಾರಗಳೂ ಸಂಪೂರ್ಣವಾಗಿ ದೈವಾಧೀನ ಎಂಬುದು ಅವನ ಮತ; ಅಂತರ್ದೃಷ್ಟಿಯ ಪ್ರತ್ಯಕ್ಷ ಜ್ಞಾನ ಉತ್ತಮ, ನಿಗಮನ ವಿಧಾನದ ಪರೋಕ್ಷ ಜ್ಞಾನ ಮಧ್ಯಮ, ಸೇಂದ್ರಿಯ ಜ್ಞಾನ ಅಧಮ ಎಂಬುದು ಅವನ ಅಭಿಪ್ರಾಯ. ಏಕದಲ್ಲಿ ಅನೇಕತೆಯನ್ನು ಅನೇಕದಲ್ಲಿ ಏಕತೆಯನ್ನು ಸಾಧಿಸಿದ ಅನೇಕಾಂತವಾದಿ ಲೆಬ್ನಿಸ್ ಶುದ್ಧ ಬುದ್ಧಿಯೆಂಬುದು ಭ್ರಮೆ, ಇಂದ್ರಿಯಾನುಭವವಿಲ್ಲದ ಜ್ಞಾನವೇ ಇಲ್ಲ, ಭಾವನೆಗಳ ಸತ್ಯತೆ ಬಾಹ್ಯ ವಸ್ತುಗಳ ಪ್ರಮಾಣದಿಂದ ದೃಢೀಕರಣಗೊಳ್ಳ ಬೇಕು- ಇದು ಲಾಕ್, ಹ್ಯೂಮ್ ಮೊದಲಾದ ಅನುಭವ ಪ್ರಾಧಾನ್ಯವಾದಿಗಳ ವಾದ. ಇಂದ್ರಿಯಾನುಭವಕ್ಕೆ ನಿಲುಕದ ಅಮೂರ್ತ ತತ್ವಗಳನ್ನವರು ತಿರಸ್ಕರಿಸುತ್ತಾರೆ. ಇಂದ್ರಿಯಾನುಭವಗಮ್ಯವಲ್ಲದ ದೇವಾತ್ಮಗಳ ಅಸ್ತಿತ್ವವನ್ನೂ, ಕಾರ್ಯ ಕಾರಣ ಸಂಬಂಧವನ್ನೂ ಡೇವಿಡ್ ಹ್ಯೂಮ್ ಖಂಡತುಂಡವಾಗಿ ಖಂಡಿಸುತ್ತಾನೆ. ಜ್ಞಾನದ ಸ್ವರೂಪ ಸಾಧನೆ ಸಿದ್ಧಿಗಳನ್ನು ಕುರಿತು ತಾತ್ವಿಕವಾಗಿ ಪರಿಶೀಲನೆ ನಡೆಸಿದ ಕಾಂಟ್ ಜ್ಞಾನಾರ್ಜನೆಗೆ ವಿಮರ್ಶಾವಿಧಾನವೇ ಸೂಕ್ತವಾದದ್ದೆಂದೂ, ಜ್ಞಾನದ ಕೇಂದ್ರ ಮನಸ್ಸೇ ಹೊರತು ವಸ್ತುವಲ್ಲವೆಂದೂ, ಬೌದ್ಧಿಕ ಕ್ರಿಯೆ ಇಂದ್ರಿಯಾನುಭವಗಳೆರಡೂ ಜ್ಞಾನಸಾಗರದ ಮೂಲಸ್ರೋತವಲಯಕ್ಕೆ ಮತಧರ್ಮ ನೀತಿ ಶಾಸ್ತ್ರಾದಿ ವಿಷಯಗಳನ್ನೂ ಸೇರಿಸುತ್ತಾನೆ. ದೇವರು ಧರ್ಮ ಮೊದಲಾದ ಅನುಭವಾತೀತ ಸಂಗತಿಗಳನ್ನು ನಂಬಬಹುದೇ ಹೊರತು, ತಿಳಿಯಲು ಸಾಧ್ಯವಿಲ್ಲವೆಂಬುದು ಅವನ ಮತ; ಡೇ ಕಾರ್ಟ್ ಸ್ಪಿನೋಸ ಮೊದಲಾದವರ ಅಸ್ತಿತ್ವಾತ್ಮಕ ಪರಿಪೂರ್ಣವಾದವನ್ನೂ, ಪ್ಲೇಟೋ ಥಾಮಸ್ ಅಕ್ವಿನಾಸ್ ಮುಂತಾದವರ ಆದಿಕಾರಣ ವಾದವನ್ನೂ, ಅಂತೆಯೇ ಉದ್ದೇಶ ವಾದವನ್ನು ತಿರಸ್ಕರಿಸಿ, ದೇವರ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳಲು ಅವನು ನೀತಿವಾದವನ್ನು ಮಂಡಿಸುತ್ತಾನೆ. ಬುದ್ಧಿ ಪ್ರಧಾನವಾದ ವಿಮರ್ಶಾ ಸಮನ್ವಯ ಮಾರ್ಗ(ಡಯಲೆಕ್ಟಿಕಲ್)ದ ಪುರಸ್ಕೃತ ಜಾರ್ಜ್ ವಿಲ್‌ಹೆಲ್ಮ್





ಫ್ರೆಡರಿಕ್ ಹೆಗಲ್; ಪ್ರಮೇಯ, ಚಲನಶೀಲ ದ್ವಂದ್ವ ಪರಂಪರೆಯನ್ನು ಪ್ರತಿ ಪ್ರಮೇಯ ಮತ್ತು ಸಮನ್ವಯಗಳ ಮೂಲಕ ಪರಿಹರಿಸಿ ಸರ್ವಮೂಲವಾದ ಅಂತಿಮ ಸತ್ಯವನ್ನು ಕಂಡುಹಿಡಿಯುವ ವಿಧಾನವಿದು; ಸತ್ಯವೇ ಜ್ಞಾನ, ಜ್ಞಾನವೇ ಸತ್ಯವೆಂಬುದು ಅವನ ನಿಲುವು, ಕಲೆ, ಧರ್ಮ ಮತ್ತು ದರ್ಶನಗಳಲ್ಲಿ ಜ್ಞಾನ ವಿಕಾಸದ ಪರಾಕಾಷ್ಠೆಯನ್ನು ಮುಟ್ಟುತ್ತದೆಂದೂ, ಪೂರ್ಣಪ್ರಜ್ಞೆಯೇ ಜ್ಞಾನವೆಂದೂ, ಅದೇ ಸತ್ಯವೆಂದೂ ಅವನು ಪ್ರತಿಪಾದಿಸುತ್ತಾನೆ.

ಸಂಸ್ಕಾರದಿಂದ ಸಂಸ್ಕೃತಿ, ಸಂಸ್ಕಾರ ಶಬ್ದದ ಅರ್ಥ ಅನೇಕ. ಪರಿಪೂರ್ಣತೆ, ಸುಪರಿಪಾಕ, ಅಲಂಕರಣ, ಮಾನಸಿಕ ಶಿಕ್ಷಣ, ಶುದ್ಧೀಕರಣ, ಭಾವನೆ, ಕಲ್ಪನೆ, ಸಾಮರ್ಥ್ಯ, ಸ್ವಯಂಸೃಜನಶಕ್ತಿ, ಸ್ಮೃತಿಶಕ್ತಿ ಇತ್ಯಾದಿ. ಈ ಅರ್ಥಗಳನ್ನು ಪರಿಶೀಲಿಸಿದಾಗ, ಅದು ಮುಖ್ಯವಾಗಿ ಮಾನಸಿಕ ಕ್ರಿಯೆಗಳನ್ನು ಸೂಚಿಸುವ ಪದವೆಂದು ವೇದ್ಯವಾಗುತ್ತದೆ. ಒಟ್ಟಿನಲ್ಲಿ ಅದು ಅಂತರಂಗದ ಪರಿಪಾಕವನ್ನು, ಅದರ ವಿಕಾಸವನ್ನು, ಅದರ ಊರ್ಧ್ವಮುಖಸ್ವಭಾವವನ್ನು ಜೀವನದ ಎಲ್ಲ ಅರ್ಥಗಳಿಗೆ ಮೂಲವಾದ, ಆ ಎಲ್ಲ ಅರ್ಥಗಳಿಗೆ ಶಿಖರಪ್ರಾಯವಾಗಿರುವ ಪರಮಾರ್ಥವನ್ನು ಸೂಚಿಸುತ್ತವೆ; ಎಷ್ಟೇ ಐಶ್ವರ್ಯವಿದ್ದರೂ, ಭೋಗಾನುಕೂಲಗಳಿರದಿದ್ದರೂ, ಯಾವುದಿದ್ದರೆ ಜೀವನ ಪರಿಪೂರ್ಣವಾಗುತ್ತದೆಯೋ ಅದೇ ಸಂಸ್ಕೃತಿಯೆಂಬುದು ಸುಸ್ಪಷ್ಟ. ಅದೊಂದು ನಿತ್ಯಮೌಲ್ಯಾತ್ಮಕ ಆದ್ಯಂತರಹಿತ ಪರಂಪರೆ; ನಿರಂತರ ನವೀಕರಣ, ಪ್ರಗತಿ, ವಿಕಾಸ, ಅಂತಃಕ್ರಾಂತಿ ಅದರ ವಿಶಿಷ್ಟ ಲಕ್ಷಣಗಳು, ಆ ಪರಂಪರೆ ಮುಂದುವರೆದಂತೆಲ್ಲ ವಿಕ್ಷಿಪ್ತ ತಾತ್ಕಾಲಿಕ ಮೌಲ್ಯಾಭ್ಯಾಸ ಗಳನ್ನೆಲ್ಲ ಹಿಂದಿಕ್ಕಿ ವಿನೂತನವೂ ನಿಃಶ್ರೇಯಾಸಾತ್ಮಕವೂ, ನಿತ್ಯವೂ ಆದ ಮೌಲ್ಯಗಳನ್ನು ತನ್ನುದರದಲ್ಲಿ ಸೇರಿಸಿಕೊಳ್ಳುತ್ತ ಮುಂದೆ ಮುಂದೆ ಸಾಗುತ್ತದೆ.

ಅದು ಕಾಲದೇಶಾತೀತವಾಗಿರುವಂತೆ ದೇಶಕಾಲ ಬದ್ಧವೂ ಅಹುದು. ಆಯಾಯ ದೇಶದ ಪರಿಸರ ಪರಿಸ್ಥಿತಿ ಸಂಸ್ಕಾರಾಭಿರುಚಿಗಳಿಗನುಸಾರವಾಗಿ ಸಂಸ್ಕೃತಿಯ ಬಾಹ್ಯ ಸ್ವರೂಪ ಪರಿಕರಗಳು ಬೇರೆಯಾದರೂ, ಅದರ ಧಾತುಗುಣ ಮಾತ್ರ ಒಂದೇಯೆಂಬುದನ್ನು ಮರೆಯುವಂತಿಲ್ಲ. ಮಾನವನ ಆತ್ಮಸಂಸ್ಕಾರಕ್ಕೆ ವಿಧಿನಿಷೇಧಗಳ ನೀತಿಸೂತ್ರಗಳ ಅನುಷ್ಠಾನ ಅತ್ಯಗತ್ಯವಷ್ಟೆ. ವಿಧಿನಿಷೇಧಗಳು ಒಂದೊಂದು ಜನಾಂಗದಲ್ಲಿಯೂ ಪ್ರತ್ಯೇಕವಾಗಿರುತ್ತವೆ. ಪ್ರಾರ್ಥನೆ, ಉಪವಾಸ-ವ್ರತ, ತೀರ್ಥಯಾತ್ರೆ ಜಗತ್ತಿನ ಅನೇಕ ಧರ್ಮಗಳಲ್ಲಿ ಸರ್ವೇ ಸಾಮಾನ್ಯವಾಗಿ ಕಾಣಬಹುದಾದ ವಿಧಿಗಳು, ಪಾಪ ಪುಣ್ಯ ವಿಚಾರ ಪುನರುತ್ಥಾನ ಮೊದಲಾದ ನಂಬಿಕೆಗಳು ಧರ್ಮದಿಂದ ಧರ್ಮಕ್ಕೆ ವ್ಯತ್ಯಾಸವಾಗುತ್ತವೆ. ಕೊಲ್ಲಬೇಡ, ಕದಿಯಬೇಡ, ವ್ಯಭಿಚಾರ ಮಾಡಬೇಡ ಇವೇ ಮೊದಲಾದ ನೀತಿ ಸೂತ್ರಗಳು ಆಧ್ಯಾತ್ಮ ಸಾಧನೆಗೆ ಅಗತ್ಯವಾದ ಪಾಠಗಳು. ದೈಹಿಕ ಅಥವಾ ಮಾನಸಿಕ ಸ್ವರೂಪ ರೂಪ ರಚನೆಗಳಲ್ಲಿ ಮನುಷ್ಯ ಮನುಷ್ಯರ ನಡುವೆ ವ್ಯತ್ಯಾಸವಿಲ್ಲವಷ್ಟೆ. ಅರಿಷಡ್ವರ್ಗಗಳೆಂತು ಮಾನವರ ಅವನತಿಗೆ ಕಾರಣವಾಗುತ್ತವೆಯೋ, ಅಂತೆಯೇ ಸತ್ಯ ಧರ್ಮ ಪ್ರೇಮ ಅಹಿಂಸೆ ಸಂಯಮ ಮೊದಲಾದ ದೈವೀಗುಣಗಳು ಅವರ ಆಧ್ಯಾತ್ಮ ವಿಕಾಸಕ್ಕೆ ಆಧಾರವಾಗುತ್ತವೆ. ಆದ್ದರಿಂದ ಸಕಲ ಮಾನವರ ಶ್ರೇಯಸ್ಸಿಗೆ ಕಾರಣವಾಗಾಬಹುದಾದ ಎಲ್ಲ ನೀತಿಸೂತ್ರ ಆಚರಣೆಗಳು ಸಂಸ್ಕೃತಿಯ ತೆಕ್ಕೆಯಲ್ಲಿ ಬರುತ್ತವೆ. ಇಂಥ ಸಂಸ್ಕೃತಿಯನ್ನು ವಿಶ್ವಸಂಸ್ಕೃತಿಯೆಂದು ಕರೆಯುತ್ತೇವೆ. ಅದೆಂತು ವಿಕಾಸಶೀಲವಾದದ್ದೋ ಅಂತೆಯೇ ಯಾನಶೀಲವಾದದ್ದೆಂದು, ಚುಂಬಕಶೀಲವಾದದ್ದೆಂದು ತಿಳಿಯಬೇಕಾಗಿದೆ.

-ಮುಂದುವರೆಯುತ್ತದೆ.

## ದಾಸೋಹಕ್ಕೆ ಕಾಣಿಕೆ

ಶಿವಮೊಗ್ಗ ನಗರದ ಸನ್ಮಾನ್ಯ ಶ್ರೀ ಹೆಚ್.ಜಿ. **ಗಡ್ಲಬಸಪ್ಪ,** ಬಿ.ಎಸ್ಸಿ, ಬಿ.ಇಡಿ., ಅವರು ಶ್ರೀಮಠದ ದಾಸೋಹ ನಿಧಿಗೆ ಭಕ್ತಿಪೂರ್ವಕವಾಗಿ ಒಂದು ಲಕ್ಷ ರೂಪಾಯಿ ಗಳನ್ನು ಸಮರ್ಪಿಸಿರುತ್ತಾರೆ. ತಾವು ಪ್ರತಿವರ್ಷವೂ ದಾಸೋಹ ನಿಧಿಗೆ ಕಾಣಿಕೆಯನ್ನು ಸಲ್ಲಿಸುವುದಾಗಿ ಭಿನ್ನವಿಸಿಕೊಂಡಿರುತ್ತಾರೆ. ಶ್ರೀಯುತರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನು ಆಶೀರ್ವದಿಸಲು ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

# ಅರಿವು ಮತ್ತು ಮರೆವು

–ತಿಪ್ಪೇರಂಗಪ್ಪ, ಗುಣ ನಿಯಂತ್ರಣ ವಿಭಾಗ (ಹೆಚ್ ಮತ್ತು ಪಿ) ಬೆಮೆಲ್ ಲಿಮಿಟೆಡ್, ಕೆ.ಜಿ.ಎಫ್–೫೬೩ ೧೧೫.

ಪ್ರಪಂಚದಲ್ಲಿ ಜನ್ಮ ತಾಳಿದ ಪ್ರತಿಯೊಂದು ಜೀವಿಗೆ, ತನ್ನದೇ ಆದ ತಿಳುವಳಿಕೆ(ಜ್ಞಾನ, ಪ್ರಜ್ಞೆ, ಅರಿವು) ಇರುತ್ತದೆ.

'ಅರಿವು' ಎಂದರೆ ಜೀವಿ ಅಥವಾ ಪ್ರಾಣಿ ಆಯಾ ಸಂದರ್ಭಕ್ಕೆ ಅದು ಯಾವ ರೀತಿ ವರ್ತಿಸುತ್ತದೆ ಎಂಬುದನ್ನು ನಿರ್ಧರಿಸುತ್ತದೆ. ಅದನ್ನೇ ತಿಳುವಳಿಕೆ, ಜ್ಞಾನ, ಪ್ರಜ್ಞೆ ಎಂದೂ ಕರೆಯುತ್ತಾರೆ.

ಪಶು, ಪಕ್ಷಿ, ಪ್ರಾಣಿಗಳಲ್ಲಿ ಭಿನ್ನ ಭಿನ್ನವಾಗಿರುವ ಅರಿವು ಮನುಷ್ಯನಲ್ಲಿ ಉನ್ನತ ಮಟ್ಟವನ್ನು ಅಲಂಕರಿಸಿದೆ. ಆದ್ದರಿಂದಲೇ ಮಾನವಜೀವಿ ಇಂದು ಪ್ರಪಂಚವನ್ನು ಆಳಲು ಸಾಧ್ಯವಾಗಿದೆ. ಆದರೂ ಮನುಷ್ಯ–ಮನುಷ್ಯರಲ್ಲಿರುವ ಜ್ಞಾನದ ಮಟ್ಟ ಭಿನ್ನವಾಗಿದೆ.

ಆಗತಾನೇ ಜನಿಸಿದ ಪಕ್ಷಿಯ ಮರಿಗಳು, ಅಮ್ಮ ಕೊಡುವ ಅಕ್ಕಿಯ ಕಾಳುಗಳಿಗೆ ಬಾಯಿ ತೆಗೆಯುತ್ತವೆ. ಆಗ ತಾನೇ ಹುಟ್ಟಿದ ಕರು ಅಮ್ಮನ ಕೆಚ್ಚಲಿಗೆ ಬಾಯಿ ಹಾಕಿ ಹಾಲು ಕುಡಿಯುತ್ತದೆ. ಇಂಥ ತಿಳುವಳಿಕೆ ಜನ್ಮತಃ ಬಂದದ್ದು. ಇದನ್ನು 'ಹುಟ್ಟರಿವು' ಎನ್ನುತ್ತಾರೆ. ತಿಳುವಳಿಕೆ ಬಂದ ವ್ಯಕ್ತಿಯನ್ನು ಕೇಳಿದರೆ ತಾನು ಅಂಬೆಗಾಲಿಟ್ಟು ನಡೆದಿದ್ದು ನೆನಪಿಲ್ಲ ಎನ್ನುತ್ತಾನೆ. ಕ್ರಮೇಣ ನೆನಪಿನ ಶಕ್ತಿ ವೃದ್ಧಿಸಿದಂತೆ ಬಾಲ್ಯದ ನೆನಪುಗಳು ಬರುತ್ತವೆ. ಯೌವ್ವನದಲ್ಲಿ ನಡೆದ ಬಹುತೇಕ ಘಟನೆಗಳು ನೆನಪಿಗಿರುತ್ತವೆ. ಮುಪ್ಪಿನಲ್ಲಿ ಮತ್ತೆ 'ಮರೆವು' ಕಾಡುವುದು ಬಹುತೇಕ ಸಾಮಾನ್ಯ. ಅದಕ್ಕೇ 'ಅರವತ್ತಕ್ಕೆ ಅರಳೋ ಮರುಳೋ' ಎನ್ನುವ ಹಾಗೆ ಪ್ರಚಲಿತದಲ್ಲಿದೆ.

ಅರಿವನ್ನು ನಮ್ಮ ಜೀವನಾನುಭವಗಳಿಂದ, ಶಿಕ್ಷಣದಿಂದ, ಗುರುವಿನ ಕೃಪೆಯಿಂದ ಕಲಿಯಬಹುದಾಗಿದೆ. ಶಿಕ್ಷಣದಿಂದ ಅರಿವನ್ನು ಪಡೆಯಬೇಕಾದರೆ, ಸತತ ಅಭ್ಯಾಸ, ಶ್ರದ್ಧೆ, ಪರಿಶ್ರಮಗಳಿಂದ ಮಾತ್ರ ಸಾಧ್ಯ. 'ದೇಶ ನೋಡು, ಕೋಶ ಓದು' ಎನ್ನುವ ಗಾದೆ ಅರಿವನ್ನು ಪಡೆಯುವುದಕ್ಕೆ ಹೇಳಿದಂತಿದೆ. ಹಿರಿಯರ ಅನುಭವಗಳನ್ನು ಕೇಳಿ, ನೋಡಿ ತಿಳಿದುಕೊಂಡಲ್ಲಿ, ಗುರುವಿನ ಸೇವೆ ಮಾಡಿ, ಅವರಿಂದ ಶ್ರದ್ಧೆಯಿಂದ ಜ್ಞಾನ ಭಿಕ್ಷೆಯನ್ನು ಬೇಡಿದಲ್ಲಿ ನಮ್ಮ ಅನುಭವಗಳು ನಮಗೆ ಪಾಠವಾಗುತ್ತವೆ.

ಅಕ್ಷರಸ್ಥರಲ್ಲಿ, ಅನಕ್ಷರಸ್ಥರಲ್ಲಿ, ಜ್ಞಾನಿ, ಅಜ್ಞಾನಿಗಳಲ್ಲಿ ಅರಿವಿನ ಮಟ್ಟ ಭಿನ್ನವಾಗಿದ್ದು, ಅದು ಅವರವರ ಜೀವನಕ್ರಮವನ್ನು ಅವಲಂಭಿಸಿರುತ್ತದೆ. ಹದಿಹರಯ ದವರಲ್ಲಿ 'ಅರಿವು ಮತ್ತು ಮರೆವು' ಅವರವರ ಆಚಾರ, ನಡತೆ, ಸಹವಾಸ ಪರಿಸರವನ್ನವಲಂಬಿಸಿರುತ್ತದೆ. ಸದಾಚಾರ, ಸದ್ಬುದ್ಧಿಗಳು ಸನ್ನಡತೆಗೆ ದಾರಿಮಾಡಿಕೊಟ್ಟರೆ, ದುರಭ್ಯಾಸಗಳು ದುರ್ನಡತೆಗೆ ದಾರಿ.

ಸನಾತನ ಹಿಂದೂ ಧರ್ಮದಲ್ಲಿ ಜ್ಞಾನ ಸಂಪಾದನೆಗೆ, ಜೀವನವನ್ನೇ ಮುಡುಪಾಗಿಟ್ಟಿದ್ದ ತಪಸ್ವಿಗಳು, ಯೋಗಿಗಳು, ಸನ್ಯಾಸಿಗಳು – ಸಿದ್ಧಿಯನ್ನು ಪಡೆದು ಲೋಕ ಕಲ್ಯಾಣ ಕಾರ್ಯಗಳನ್ನು ಮಾಡಿದ್ದಾರೆ. ವೇದ–ಉಪನಿಷತ್ ವಚನಾಮೃತಗಳನ್ನು ಬರೆದಿದ್ದಾರೆ.

'ಅರಿತರೆ ಶರಣ ಮರೆತರೆ ಮಾನವ' – ಎನ್ನುವ ವಚನೋಕ್ತಿ, ಶಿವನಿಗೂ ಭಕ್ತನಿಗೂ ಮತ್ತು ಭಕ್ತನಿಗೂ – ಸಾಮಾನ್ಯ ಮನುಷ್ಯನಿಗಿರುವ ಸಂಬಂಧವನ್ನು ಸೂಚಿಸುತ್ತದೆ.

'ಅರಿವೇ ಗೆಲುವು'– ಜ್ಞಾನವಿದ್ದಲ್ಲಿ ಪ್ರಪಂಚದಲ್ಲಿ ಎಲ್ಲಿ ಬೇಕಾದರೂ ಗೆದ್ದು ಬರಬಹುದು.

'ಜ್ಞಾನವೇ ಬೆಳಕು' –ಜ್ಞಾನದ ಮುಂದೆ ಮತ್ತೇನೂ ಪ್ರಕಾಶಿಸಲಾರದು.

ಜ್ಞಾನಿಯೇ ದೇವರು – ಜ್ಞಾನಿ(ತಿಳಿದವನು) ದೈವಸಮಾನ.

ನಮ್ಮ ಮಾತು ಕೃತಿಗಳು, ನಮ್ಮ ನಮ್ಮ ಸುಖದುಃಖಗಳಿಗೆ ಕಾರಣವಾಗುತ್ತವೆ. ಸತ್ಕರ್ಮ, ಸನ್ನಡತೆಗಳು ನಮ್ಮನ್ನು ಜ್ಞಾನಿಗಳನ್ನಾಗಿಸಿದರೆ, ಜ್ಞಾನಿಗೆ ಪ್ರಪಂಚವು ಗೌರವವನ್ನು ನೀಡುತ್ತದೆ. ಅಜ್ಞಾನಿಗೆ ಅಗೌರವದ ಉಡುಗೊರೆ. ನಮ್ಮ ನಡವಳಿಕೆಗಳಿಂದ ನಾವು ಇತರರಿಗೆ ಮಿತ್ರ ಶತೃಗಳಾಗಬಲ್ಲವು. ಅಲ್ಲದೇ ನಮ್ಮ ಜೀವನದಲ್ಲಿ ಸೋಲು–ಗೆಲವುಗಳಿಗೂ ಮೂಲ ನಮ್ಮ ತಿಳುವಳಿಕೆಯೇ ಈ ಕುರಿತ ಹನಿಗವನ ಈ ರೀತಿ ಇದೆ.

*'ತನ್ನರಿವು ತನಗೆ ಅರಿಯಾದಾಗ ಸೋಲು*
*ತನ್ನರಿವು ತನಗೆ ಅರಿವಾದಾಗ ಗೆಲುವು*

ಅರಿವನ್ನು ಪ್ರಜ್ಞೆ ಎಂದೂ ಹೇಳಬಹುದು. ಪ್ರಜ್ಞೆಗಳಲ್ಲಿ ಸ್ಥಿತಪ್ರಜ್ಞೆ ಸುಪ್ತಪ್ರಜ್ಞೆ ಮತ್ತು ಅಪ್ರಜ್ಞೆಗಳೆಂಬ ಬಗೆಗಳಿವೆ.

ಸ್ಥಿತಪ್ರಜ್ಞನಾದ ವ್ಯಕ್ತಿಯ ವ್ಯವಹಾರ, ನಡವಳಿಕೆಯು ಎಲ್ಲಾ ಕಾಲದಲ್ಲಿಯೂ ಒಂದೇ ಸಮನಾಗಿರುವುದು. ಕಷ್ಟ





ಬಂದಾಗ ಕುಗ್ಗದೆ ಸಂತೋಷವಾದಾಗ ಹಿಗ್ಗದ ಸ್ಥಿತಪ್ರಜ್ಞನಾಗಿರುತ್ತಾನೆ.

ಸುಪ್ತಪ್ರಜ್ಞೆಯು ಯಾವುದೋ ಒಂದು ಸಂದರ್ಭದಲ್ಲಿ ಜಾಗೃತಗೊಂಡು ಆ ಸಂದರ್ಭಕ್ಕೆ ಅನುಗುಣವಾದ ಕಾರ್ಯವನ್ನು ಮಾಡಿಸುವುದಾಗಿದೆ.

ಅಪ್ರಜ್ಞನ ಮಾತು–ಕೃತಿಗಳಿಗೆ ಸಂಬಂಧವಿರುವುದಿಲ್ಲ. ಆತ ಹೇಳುವುದು ಒಂದಾದರೆ ಮಾಡುವುದು ಮತ್ತೊಂದು. ಇಂದ್ರಿಯಗಳು, ಮನಸ್ಸು, ಬುದ್ಧಿ–ಆತ್ಮಗಳ ಸಮತೋಲನ ಮತ್ತು ಅಸಮತೋಲನ ಕ್ರಿಯೆಗಳಿಂದಾಗಿ ನಾವು ಜ್ಞಾನ ಅಥವಾ ಅಜ್ಞಾನವನ್ನು ಪ್ರದರ್ಶಿಸುವ ಸಂದರ್ಭಗಳು ಒದಗಿ ಬರುತ್ತವೆ.

ಉದಾಹರಣೆಗೆ ದೂರದ ರಸ್ತೆಯಲ್ಲಿ ಹೋಗುವ ದಾರಿಹೋಕರನ್ನು ನಮ್ಮ ಪರಿಚಯದವರಂತೆ ಕೂಗಿ ಕರೆಯುತ್ತೇವೆ. ಅವರು ಬೇರೆಯವರೇ ಆಗಿದ್ದಾಗ, ಕ್ಷಮಿಸಿ ನಮ್ಮ ಪರಿಚಯದವರೆಂದು ತಿಳಿದು ನಿಮ್ಮನ್ನು ಕರೆದೆ ಎನ್ನುತ್ತೇವೆ.

ಕಥೆಯೊಂದರಲ್ಲಿ ಬರುವಂತೆ, ತೊಟ್ಟಿಲಲ್ಲಿದ್ದ ಮಗುವನ್ನು ಕಚ್ಚಲು ಬಂದ ಹಾವನ್ನು, ತಾನೇ ಸಾಕಿದ್ದ ಮುಂಗುಸಿಯೊಂದು ಕಚ್ಚಿ ಸಾಯಿಸಿ ಬಂದು ಬಾಗಿಲಲ್ಲಿದ್ದಾಗ, ಮುಂಗುಸಿಯ ಬಾಯಿ ರಕ್ತವಾಗಿದ್ದನ್ನು ಕಂಡ ತಾಯಿ ಮುಂಗುಸಿಯೇ ಮಗುವನ್ನು ಕಚ್ಚಿದೆ ಎಂದು ಮೊದಲು ಮುಂಗುಸಿಯನ್ನು ಸಾಯಿಸುತ್ತಾಳೆ. ಒಳಗೆ ಹೋಗಿ ನೋಡಿದರೆ, ನಗುತ್ತಿದ್ದ ಮಗು ಮತ್ತು ತೊಟ್ಟಿಲ ಕೆಳಗೆ ಸತ್ತು ಬಿದ್ದ ಹಾವು– ಇವು ನಮ್ಮ ಅಜ್ಞಾನಕ್ಕೆ, ಆತುರದ ನಿರ್ಧಾರಕ್ಕೆ ಸಾಕ್ಷಿ.

ಇಂಥ ಎಷ್ಟೋ ಸಂದರ್ಭಗಳು ನಮ್ಮ ಬದುಕಿನಲ್ಲಿ ಬರುತ್ತವೆ. 'ಅರಿತು ನಡೆದರೆ ನೂರು ವರುಷ–ಮರೆತು ಬಾಳಿದರೆ ಮೂರು ನಿಮಿಷ' ಮನುಷ್ಯ ತಿಳುವಳಿಕೆ ಇರುವವನಾಗಿ ಏಕೆ ಮತ್ತು ಹೇಗೆ ಬಾಳಬೇಕೆನ್ನುವ ಈ ಗಾಥೆ ಮಾರ್ಮಿಕವಾಗಿ ತನ್ನ ಜವಾಬ್ದಾರಿಯನ್ನು ಕೇಳುತ್ತಿದೆ. ಸುರಕ್ಷತೆಯು ಸುಜ್ಞಾನದಿಂದಲೇ ಲಭಿಸುವಂಥದು. ಅದನ್ನೇ ನಾವು ಅರಿಯಬೇಕಾದದ್ದು. ನಮ್ಮ ಜೀವನದ ಮೂಲ ಉದ್ದೇಶವನ್ನೇ ಮರೆತು ಅನಾಚಾರದ ಮಾರ್ಗವನ್ನು ಹಿಡಿದು ಬದುಕ ಹೊರಟಾಗ ತೊಂದರೆಗಳು ಉಂಟಾಗಿ ಕೊನೆಗೆ ಬದುಕೇ ಬರಡಾಗುವ ಸಂದರ್ಭಗಳು ಬರುತ್ತವೆ. 'ಬುದ್ಧಿವಂತನಿಗೆ ಮಾತಿನ ಪೆಟ್ಟು, ದಡ್ಡನಿಗೆ ದೊಣ್ಣೆ ಪೆಟ್ಟು' ಎಂದು ನಮ್ಮ ಹಿರಿಯರು ಸೂಚ್ಯವಾಗಿ ಆಡುಭಾಷೆಯಲ್ಲೇ ಹೇಳಿದ ಗಾದೆ ಹಿರಿಯರ ಮಾರ್ಗದಲ್ಲಿ ನಡೆಯಬೇಕಾದ್ದು ಬುದ್ಧಿವಂತರ ಧರ್ಮ.

ಜ್ಞಾನದಲ್ಲಿ ಹಲಬಗೆಗಳುಂಟು. ಸುಜ್ಞಾನ, ಸಾಮಾನ್ಯ ಜ್ಞಾನ, ವಿಜ್ಞಾನ, ಅಜ್ಞಾನ. ಯಾವ ವ್ಯಕ್ತಿ ಯಾವ ಜ್ಞಾನವನ್ನು ಹೊಂದಿರುತ್ತಾನೋ ಅವನು ಕ್ರಮವಾಗಿ ಸುಜ್ಞಾನಿ, ಜ್ಞಾನಿ, ವಿಜ್ಞಾನಿ ಮತ್ತು ಅಜ್ಞಾನಿ ಎನಿಸಿಕೊಳ್ಳುತ್ತಾನೆ. ಪ್ರಪಂಚದಲ್ಲಿ ಯಾರಿಗೂ ಬುದ್ಧಿ ಹೇಳುವ ಅವಶ್ಯಕತೆ ಇಲ್ಲವಂತೆ, ಏಕೆಂದರೆ ಜ್ಞಾನಿಗೆ ಎಲ್ಲವೂ ತಿಳಿದಿರುತ್ತದೆ. ದಡ್ಡನಿಗೆ ಅರ್ಥವಾಗುವುದಿಲ್ಲ. ಆದರೂ ಜ್ಞಾನಿಯಾದವರು ಬುದ್ಧಿ ಹೇಳುವ ಅಧಿಕಾರವನ್ನು ಹೊಂದಿರುತ್ತಾರೆ ಏಕೆಂದರೆ ಅವರು ಗುರುವಿನ ಸ್ಥಾನದಲ್ಲಿರುತ್ತಾರೆ.

'ಅರಿವೇ ಗುರು' ಎನ್ನುತ್ತದೆ ಸುಭಾಷಿತ. ತನ್ನ ಬುದ್ಧಿಯೇ ತನಗೆ ಮಾರ್ಗದರ್ಶಿ. ಆದರೂ ಗುರುವಿನ ಹಿತವಚನಗಳು ನಮ್ಮ ಬಾಳಿಗೆ ದಾರಿದೀಪವಾಗುತ್ತವೆ.

'ಸುಮ್ಮನಿರಬೇಕು ಸುಜ್ಞಾನಿ ಜಗದೊಳಗೆ ಜನ ತಿಳಿಯದ್ಹಾಂಗೆ'– ಎಂದು ಗೀತೆಯೊಂದು ಹೇಳಿದರೂ ಲೋಕ ಕಲ್ಯಾಣ ಕಾರ್ಯ, ಜ್ಞಾನಿಯಾದವನ ಧರ್ಮ, ಆದ್ದರಿಂದಲೇ ಅವರು ಲೋಕಕಲ್ಯಾಣದ ಬಗ್ಗೆ ಚಿಂತಿತರಾಗಿರುತ್ತಾರೆ. ಅಜ್ಞಾನದಿಂದ ಜೀವನವನ್ನು ನರಕ ಮಾಡಿ ಕೊಂಡವರ ಜೀವನ್ಮುಕ್ತಿಗಾಗಿ ಶ್ರಮಿಸುವವರಾಗಿರುತ್ತಾರೆ. ಶ್ರೀ ಶಂಕರಾಚಾರ್ಯರು, ಸ್ವಾಮಿ ವಿವೇಕಾನಂದರು, ಅಣ್ಣಬಸವಣ್ಣನವರು, ಗೌತಮ ಬುದ್ಧ, ಗಾಂಧೀಜಿ, ಅಂಬೇಡ್ಕರ್, ಅರವಿಂದರು ಮುಂತಾದ ದಾರ್ಶನಿಕರು ಲೋಕ ಕಲ್ಯಾಣಕ್ಕೆ ಶ್ರಮಿಸಿದರು.

ಅಜ್ಞಾನಿಯು ಕೊಂಬೆಯ ಮೇಲೆ ಕುಳಿತು ಮರದ ಬುಡ ಕಡಿಯುವವನಾಗಿದ್ದರೆ, ಸುಜ್ಞಾನಿಯು ಗಿಡ ನೆಟ್ಟು ಪೋಷಿಸುವವನಾಗಿರುತ್ತಾನೆ. ಸಾಮಾನ್ಯ ಜ್ಞಾನವನ್ನು 'ವ್ಯವಹಾರ ಜ್ಞಾನ'ವೆಂದು ಕರೆಯುತ್ತಾರೆ. ಇದರಿಂದಲೇ ವ್ಯಕ್ತಿಯನ್ನು 'ಬುದ್ಧಿವಂತ' ಅಥವಾ 'ತಿಳುವಳಿಕೆ ಇಲ್ಲದವ' ಎಂದು ವಿಂಗಡಿಸುತ್ತಾರೆ.

ವಿಜ್ಞಾನವೆಂದರೆ ಹೊಸ ಹೊಸ ಸಂಶೋಧನೆ ಮತ್ತು ಪ್ರಯೋಗಗಳಿಂದ ಹೊಸತನ್ನು ತಿಳಿದುಕೊಂಡು ಅದನ್ನು ಪಾಲಿಸುವುದಾಗಿದೆ. ಇಂದು ನಾವುಗಳು ವಿಜ್ಞಾನ ಯುಗದಲ್ಲಿದ್ದು, ವಿಜ್ಞಾನದ ಸಾಧಕ ಬಾಧಕ ಫಲಗಳನ್ನು ಅನುಭವಿಸುತ್ತಿದ್ದೇವೆ.

ಮಹಾಜ್ಞಾನಿಯಾದ ಸರ್ವಜ್ಞ ಕವಿಯು ಜ್ಞಾನದ (ಅರಿವಿನ) ಬಗ್ಗೆ ಹೀಗೆಂದು ಹೇಳಿದ್ದಾನೆ.

1) ಜ್ಞಾನದೈಂದಲೇ ಇಹಪರವು, ಅದಿಲ್ಲದಿದ್ದರೆ ಸಕಲ ವಿದ್ದರೂ ಅದು ನಾಶವಾಗುವುದು.

2) ಶಿವನನ್ನು(ದೇವರನ್ನು) ಅರಿಯುವ ಕಾರ್ಯವೇ ಶ್ರೇಷ್ಠ ವಾದ ಕಾರ್ಯ.
3) ಜ್ಞಾನಿಗೆ ಇಹಪರಗಳಿಲ್ಲ, ಮೇಲು ಕೀಳುಗಳಿಲ್ಲ, ಇತರರಿಗೆ ಅಂಜುವುದಿಲ್ಲ.
4) ಬ್ರಹ್ಮ ಸತ್ಯವನ್ನು ತಿಳಿದವನು ಮತ್ತೆ ಸಂಸಾರವನ್ನು ಹೊಂದುವುದಿಲ್ಲ. ತನ್ನ ಆತ್ಮವನ್ನು ತಿಳಿದವನು ಮಾಯೆ ಯಿಂದ ತೊಂದರೆಗೊಳಗಾಗುವುದಿಲ್ಲ.
5) ಹಿರಿಯರಾದಂತೆಲ್ಲ ಜೀವನಾನುಭವದಿಂದ ಅರಿವನ್ನು ಹೆಚ್ಚಿಸಿಕೊಳ್ಳಬೇಕು. ಅಜ್ಞಾನವನ್ನು ಅಳಿಸಬೇಕು.
6) ಜ್ಞಾನವೇ ಪರಬ್ರಹ್ಮ.
7) ಅಗತ್ಯವಾದಾಗ ಮಕ್ಕಳಿಂದಲೂ ತಿಳಿದುಕೊಳ್ಳುವುದರಲ್ಲಿ ತಪ್ಪಿಲ್ಲ.
8) ಸರ್ವರೊಳು ಒಂದಾಗಿ ನುಡಿ ಕಲಿತು ತಾನಾದುದು ಸರ್ವಜ್ಞ.

ಅರಿವಿನ ಕೊರತೆಯಿಂದ ಎಷ್ಟೋ ಜನರು, ತಪ್ಪು ತಿಳುವಳಿಕೆಗೆ ಬಲಿಯಾಗುತ್ತಾರೆ. ದುಃಖಿಗಳಾಗಿ ಜೀವನ ವನ್ನು ಕಳೆಯುತ್ತಾರೆ. ಭವಿಷ್ಯವನ್ನು ನರಕ ಮಾಡಿಕೊಳ್ಳು ತ್ತಾರೆ. ಆದ್ದರಿಂದ ನಾವು ನೀವೆಲ್ಲರೂ ಅಜ್ಞಾನದಿಂದ ಹೊರಬಂದು ಜ್ಞಾನಿಗಳಾಗಲು ಪ್ರಯತ್ನಿಸೋಣ.

ಇನ್ನು ಮರೆವಿನ ಬಗ್ಗೆ ತಿಳಿದುಕೊಳ್ಳುವುದಾದರೆ, ನಾವು ತಿಳಿದುಕೊಂಡ ವಿಚಾರಗಳು, ಸಂಗತಿಗಳು, ವಿದ್ಯೆ, ಜ್ಞಾನ, ನೋಟಗಳು ಸಕಾಲಕ್ಕೆ ನೆನಪಿಗೆ ಬಾರದಿರುವುದನ್ನು ಮರೆವು ಎನ್ನುತ್ತಾರೆ. 'ಮರೆವು' ಕೆಲವರಲ್ಲಿ ಹುಟ್ಟಿನಿಂದಲೇ ಕಾಣಿಸಿಕೊಂಡರೆ, ಹಲವರಲ್ಲಿ ಒತ್ತಡ(ಮಾನಸಿಕ & ಔದ್ಯೋಗಿಕ ಒತ್ತಡ) ಅಪಘಾತ, ಬೇಜವಾಬ್ದಾರಿ, ಅಸಡ್ಡೆ, ಜಾಗೃತಿಯ ಕೊರತೆಗಳಿಂದ ಮರೆವು ಕಾಣಿಸಿಕೊಳ್ಳುತ್ತಾರೆ. ಸಾಮಾಜಿಕ ಜವಾಬ್ದಾರಿಯನ್ನು ಅಭ್ಯಾಸ ಮಾಡಿಕೊಳ್ಳದೆ ರೂಢಿಸಿಕೊಳ್ಳುವುದು ಕಷ್ಟ (ಸಾಂಸಾರಿಕ ಜವಾಬ್ದಾರಿಯನ್ನು ಹೊರತುಪಡಿಸಿ).

ಸಾಮಾನ್ಯವಾಗಿ ಮನುಷ್ಯ ವರ್ತಮಾನವನ್ನು ಮರೆತು, ಭೂತಕಾಲದ ಮತ್ತು ಭವಿಷ್ಯದ ವಿಚಾರಗಳಿಗೆ ಯೋಚಿಸುವುದೇ ಹೆಚ್ಚು. 'ಮರೆವು' ಕೆಲವರಿಗೆ ವರವಾದರೆ ಮತ್ತೆ ಕೆಲವರಿಗೆ ಶಾಪ. ಜ್ಞಾನಿಗೆ 'ಮರೆವು' ರೋಗವಾಗಿ, ಶಾಪವಾಗಿ ಕಾಡಿದರೆ, ಸಂಸಾರದ ಜಂಜಾಟದಲ್ಲಿ ಬೇಸತ್ತ ವ್ಯಕ್ತಿಗೆ ಸ್ವಲ್ಪವಾದರೂ ಸಮಾಧಾನ ಆನಂದವನ್ನು ನೀಡುವುದಾದರೆ ಅದು ವರ. ರಣರಂಗದಲ್ಲಿ ಕರ್ಣನಿಗೆ ಉಂಟಾದ ಮರೆವು ಶಾಪವಾಗಿ ಪರಿಣಮಿಸಿದರೆ, ಭಕ್ತ ಪ್ರಹ್ಲಾದನಿಗೆ ತನ್ನಪ್ಪ ನೀಡುತ್ತಿದ್ದ ಕಿರುಕುಳಗಳೆಲ್ಲ ಮರೆತು ದೈವವನ್ನು ಸೇವಿಸುತ್ತ ಮುಕ್ತಿ ಪಡೆಯಲು ಅದು ವರವಾಗಿತ್ತು.

ಸನಾತನ ಸಂಸ್ಕೃತಿಯ ವಾರಸುದಾರರಾದ ನಾವು ಇಂದು ಮರೆತಿರುವುದಾದರೂ ಏನನ್ನು? ಏಕೆ? ಎನ್ನುವ ಪ್ರಶ್ನೆಗಳನ್ನು ಹಾಕಿಕೊಂಡರೆ ಉತ್ತರವನ್ನು ಹುಡುಕಲು ಸುಲಭವಾದೀತು. ಈಗಿನ ದಿನಗಳಲ್ಲಿ, ಭ್ರಮೆಯನ್ನು, ಮನಸ್ಸಿನಲ್ಲಿ ತುಂಬಿಕೊಂಡು ಸಂಭ್ರಮಿಸುತ್ತಿರುವ ನಾವು ನಮ್ಮ ಜೀವನ ಪದ್ಧತಿಯನ್ನೇ ಮರೆತಿದ್ದೇವೆ. ನಮ್ಮ ಜನಪದ ಸಂಸ್ಕೃತಿ, ಬೇಸಾಯ ಕಲೆಗಳನ್ನು ಅಷ್ಟೇ ಏಕೆ ಭಾಷೆಯನ್ನು ಮರೆತಿದ್ದೇವೆ. (ಸಾಮಾಜಿಕ ಜವಾಬ್ದಾರಿಗಳೂ ದೂರ ವಾಗುತ್ತಿವೆ) ಅವಿಭಕ್ತ ಕುಟುಂಬಗಳು ಮುರಿದು ಇಂದು ಒಂಟಿ ಮನುಷ್ಯ ವಾಸಿಸುವ ಹಂತವನ್ನು ತಲುಪಿದ್ದೇವೆ. ಸಮುದಾಯಿಕ ಜೀವನದಲ್ಲಿ ನಂಬಿಕೆ ಕಡಿಮೆ ಯಾಗಿದೆ. ಸ್ವಾರ್ಥಪರ ಚಿಂತನೆಗಳು ಮನಸ್ಸಿನಲ್ಲಿ ಅಡಕವಾಗುತ್ತಿವೆ. ಪತಿ/ಪತ್ನಿ, ಪುತ್ರ ವ್ಯಾಮೋಹದ ಜೊತೆ ಹಣ ಆಸ್ತಿಯ ಆಸೆ ಮಿತಿ ಮೀರುತ್ತಿದೆ. ಮನುಷ್ಯನ ಮರ್ಯಾದೆಯನ್ನು ಹಣ ಬಲದಲ್ಲಿ ಅಳೆಯಲಾಗುತ್ತಿದೆ. ಪರಿಣಾಮವಾಗಿ ಹೆತ್ತು ಹೊತ್ತು ಬೆಳೆಸಿದ ತಂದೆ ತಾಯಿಯರನ್ನು ಮುಪ್ಪಿನ ಕಾಲದಲ್ಲಿ ಸಾಕಲಾರದ ನಿರ್ಭಾಗ್ಯರು ನಾವಾಗುತ್ತಿದ್ದೇವೆ. ನಮ್ಮ ನಮ್ಮಲ್ಲಿ ಪ್ರೀತಿ, ವಿಶ್ವಾಸ, ನಂಬಿಕೆಗಳನ್ನು ಕಳೆದುಕೊಂಡಿದ್ದೇವೆ. ಮನೆ ಮನ ಗಳಲ್ಲಿ ಹಿಂಸೆ ಮನೆ ಮಾಡಿಕೊಳ್ಳುತ್ತಿದೆ. ಮನುಷ್ಯರಾದ ನಾವು ಮನುಷ್ಯತ್ವವನ್ನೇ ಮರೆಯುವ ಹಂತವನ್ನು ತಲುಪಿದ್ದೇವೆ. ಆದರೂ.... ನಮ್ಮ ನಡುವಿನಲ್ಲಿ ಆಗಾಗ ಮಹಾತ್ಮರು ಜನಿಸಿ, ಜಗತ್ತಿಗೆ ತಕ್ಕ ಸದ್ಬುದ್ಧಿಗಳನ್ನು ಹೇಳುತ್ತ, ಸತ್ಕಾರ್ಯಗಳನ್ನು ಮಾಡುತ್ತ ಮತ್ತೆ ಜನರಲ್ಲಿ ಪ್ರೀತಿ, ವಿಶ್ವಾಸವನ್ನು ಮೂಡಿಸುತ್ತ ಲೋಕಕಲ್ಯಾಣವನ್ನು ಮಾಡುತ್ತಾರೆ. ಅಂಥವರಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೂ ಒಬ್ಬರು. ಅವರ ಜೀವನಾದರ್ಶನಗಳು ನಮ್ಮೆಲ್ಲರ ಬಾಳಿಗೆ ಬೆಳಕಾಗಲಿ. ಇಂಥ ಸಜ್ಜನ ಸನ್ಯಾಸಿಯ ಆಶೀರ್ವಾದವನ್ನು ಹೊಂದಿರುವ ನಾವುಗಳು ನಮ್ಮ ಜ್ಞಾನದಾಹವನ್ನು ಇಂಗಿಸಿ ಕೊಳ್ಳೋಣ. ಸಕಲ ವಿದ್ಯೆಗಳಲ್ಲಿ ಜ್ಞಾನ ಸಂಪಾದಿಸಲಾಗು ವುದಿಲ್ಲವಾದರೂ ನಮ್ಮ ನಮ್ಮ ಕಾರ್ಯಕ್ಷೇತ್ರದಲ್ಲಿ ಜ್ಞಾನ ಸಂಪಾದಿಸಿ, ಕಾಯ, ವಾಚ, ಮನಸಾ ಶುದ್ಧರಾಗಿದ್ದು ಕಾಯಕ ಯೋಗಿಯ ಗುಣಗಳನ್ನು ಪಾಲಿಸೋಣ. ಅವರ ನೈಜಕಳಕಳಿ ಯಂತೆ ಎಲ್ಲ ವರ್ಗದ ಜನರ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿಯಾಗಬೇಕಾದರೆ ಸರ್ವರೂ ಸುಖಿಗಳಾಗಬೇಕಾ ದರೆ, ನಮ್ಮಲ್ಲಿನ ನೈಜ ಪ್ರಜ್ಞೆಯು ನಮ್ಮಿಂದ ನಿತ್ಯವೂ ಶುಭಕಾರ್ಯವನ್ನು ಮಾಡಿಸಲಿ, ಅದಕ್ಕೆ ಪರಮಪೂಜ್ಯ ಮಹಾ ಸ್ವಾಮಿಗಳವರ ಶುಭಾಶೀರ್ವಾದವನ್ನು ಬೇಡೋಣ.

*





# 'ಬಸವಪ್ರಿಯ ಹಡಪದ ಅಪ್ಪಣ್ಣ'

–ಯು.ಎನ್. ಸಂಗನಾಳಮಠ, ಎಂ.ಎ.ಬಿ.ಇಡಿ., ರಾಜ್ಯಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಹೊನ್ನಾಳಿ, ದಾವಣಗೆರೆ.

*'ಮಹಾಘನ ನೆಲೆಗೊಂಡಿದ್ದ, ಶರಣನ ನೆಲೆ ಎಂತಿಪ್ಪ ವೆಂದರೆ ನೆಲವ ಮರೆಯ ನಿಧಾನದಂತೆ, ತಿಲದ ಮರೆಯ ತೈಲದಂತೆ, ಮುಗಿಲ ಮರೆಯ ಮಿಂಚಿನಂತೆ, ನೀರೊಳಗಣ ಕಿಚ್ಚಿನಂತೆ, ಕಾಷ್ಠದೊಳಗಣ ಅಗ್ನಿಯಂತೆ, ತೃಣದೊಳಗಣ ಚೈತನ್ಯದಂತೆ, ಈ ವಿಶ್ವದೊಳು ಇದ್ದೂ ಇಲ್ಲದಂತಿಪ್ಪ ಮಹಾಘನವ ನಿಮ್ಮ ಶರಣರು ಬಲ್ಲರಲ್ಲದೆ, ಮರ್ತ್ಯದ ಮರಣ ಬಾಧೆಗೊಳಗಾದ ಮನುಜರೆತ್ತ ಬಲ್ಲರು ಬಸವಪ್ರಿಯ ಕೂಡಲ ಚೆನ್ನಬಸವಣ್ಣ'*

ಬಸವಪ್ರಿಯ ಕೂಡಲ ಚೆನ್ನಬಸವಣ್ಣ ಅಂಕಿತದಲ್ಲಿ ಹಡಪದ ಅಪ್ಪಣ್ಣ ಅನೇಕ ವಚನಗಳನ್ನು ರಚಿಸಿದ್ದಾರೆ. ಹಡಪದ ಅಪ್ಪಣ್ಣ ಅನುಭವ ಮಂಟಪದ ಅನುಪಮ ಚೇತನ ಮತ್ತು ಮಹಾನುಭಾವಿ. ಇವನ ಸಮರ್ಪಣ ಮತ್ತು ಸೇವಾ ಮನೋಭಾವ ಅವರ್ಣನೀಯ. ಶಿವಶರಣೆ ವಚನಕಾರ್ತಿ ಲಿಂಗಮ್ಮ ಇವನ ಪತ್ನಿ. ಈತನ ಕಾಯಕ ನಿಷ್ಠೆ, ಜೀವನ ನಿಷ್ಠೆ, ಸೇವಾ ನಿಷ್ಠೆ ಈ ಶರಣನ ವಿಶೇಷಣಗಳು. ಈತನ ಗುರು 'ಚೆನ್ನಮಲ್ಲೇಶ್ವರ' ತನ್ನ ವಚನಗಳಲ್ಲಿ ಈ ಗುರುವನ್ನು ಸ್ಮರಿಸಿದ್ದಾನೆ. 'ಎನ್ನ ಗುರು ಚೆನ್ನಮಲ್ಲೇಶ್ವರಬಲ್ಲ ಇನ್ನು ನಮ್ಮ ಬಸವಪ್ರಿಯ ಕೂಡಲ ಚೆನ್ನಬಸವಣ್ಣನೇ ಬಲ್ಲ ಎಂದು ವಚನದಲ್ಲಿ ಹೇಳಿದ್ದಾರೆ. 'ಎನ್ನ ಪರಮಾಧ್ಯರು ಚೆನ್ನಮಲ್ಲೇಶ್ವರ, ಮಾಯೆಯ ಮಂಡೆಯ ಮೆಚ್ಚಿ, ಎನ್ನ ತನುಮನ ಧನಕ್ಕೆ ಒಡೆಯನಾಗಿ, ತನ್ಮಯನಾಗಿ ಕೂಡಲ ಚೆನ್ನಬಸವಣ್ಣ' ಎಂದು ಗುರುವನ್ನು ಸ್ಮರಿಸಿ ಮಹಿಮೆಯನ್ನು ಸ್ತುತಿಸಿದ್ದಾನೆ.'

ಬಸವಣ್ಣನವರು ಕಲ್ಯಾಣಕ್ಕೆ ಬಂದ ಆರಂಭದ ದಿನಗಳಿಂದ ಅವರ ಜೀವನ ಪರ್ಯಂತ ಅವರ ಆಪ್ತ ಕಾರ್ಯದರ್ಶಿಯಾಗಿ, ಹಡಪಿಗನಾಗಿ, ದೂತನಾಗಿ, ಪ್ರತಿಹಾರಿಯಾಗಿ ಕುಟುಂಬದ ಸದಸ್ಯನಾಗಿ, ನೆರಳಾಗಿ ಇದ್ದವನು ಹಡಪದ ಅಪ್ಪಣ್ಣ. ಉದಯಕಾಲದಲ್ಲಿ ಬಸವಣ್ಣ ನವರ ಪಾದಗಳಿಗೆ ನೀರು ಕೊಡುವುದರಿಂದ ಹಿಡಿದು ರಾತ್ರಿ ಮಲಗುವ ಮುನ್ನ ವೀಳ್ಯೆ ಕೊಡುವುದರವರೆಗೆ ಅಪ್ಪಣ್ಣನ ಕಾಯಕದ ಸೇವೆ, ಮಹಾಮನೆಗೆ ಬರುವವರ ಸತ್ಕಾರ ಯೋಗಕ್ಷೇಮ ಸಹ ಅಪ್ಪಣ್ಣನ ಜವಾಬ್ದಾರಿ. ಲೌಕಿಕ ಪಾರಮಾರ್ಥದಲ್ಲಿ ಸಹಾಯಕನಾಗಿದ್ದನು. ಪಾರಮಾರ್ಥ ದಲ್ಲಿ ಅನುಭಾವವನ್ನು ಲೌಕಿಕದಲ್ಲಿ ಅನುಭವವನ್ನು ಹೊಂದಿ ನಿಜ ಸುಖಿ ಅಪ್ಪಣ್ಣ' ಎಂದು ಶಿವಶರಣರಿಂದ ಕರೆಯಲ್ಪಟ್ಟನು.

ಒಂದು ದಿನ ಎಲ್ಲಿಂದಲೋ ಅಲ್ಲಮಪ್ರಭು ಬಸವಣ್ಣ ನವರ ಮಹಾಮನೆಯ ಬಾಗಿಲ ಮುಂದೆ ನಿಂತರು. ಅವರ ಮಗ್ಗುಲಲ್ಲಿ ಸಿದ್ಧರಾಮರು ಇವರಿಬ್ಬರನ್ನು ಅಪ್ಪಣ್ಣ ಗುರುತಿಸದಿದ್ದರೂ, ಇವರು ಅಸಾಧಾರಣ ಚೇತನರು ಮತ್ತು ಯಾವ ಮಹಾಮಹಿಮರ ಬರವಿಗಾಗಿ ಬಸವಣ್ಣ ನವರು ಅಷ್ಟು ದಿನಗಳವರೆಗೆ ಕಾಯುತ್ತ ಕುಳಿತಿದ್ದರೋ ಆ ಮಹಾಮಹಿಮರು ಬಂದು ಬಾಗಿಲಲ್ಲಿ ನಿಂತಿದ್ದಾರೆಂದು ಅಪ್ಪಣ್ಣನವರ ದಿವ್ಯದೃಷ್ಟಿಗೆ ಗೋಚರಿಸಿತು. ಆಗ ಒಳಗೆ ಬಂದು ಬಸವಣ್ಣನವರನ್ನು ಕುರಿತು ;

*'ದೇವ ದೇವಾ ಮಹಾಪ್ರಸಾದ*
*ಕಂಗಳಿಲ್ಲ ಕರುಳಿಲ್ಲ ಕಾಯದಲ್ಲಿ ಹೊರೆಯಿಲ್ಲ*
*ನುಡಿಯಲ್ಲಿ ಕೆಡೆಯಿಲ್ಲ ನಡೆಯಲ್ಲಿ ಗತಿಯಿಲ್ಲ*
*ಇದೆಂತಹ ಸುಳು ಹಂದರಿಮೆ*
*ಇದೆಂತಹ ನಿಲುವೆಂದು ತಿಳಿಯಬಾರದು.*
*ಮರುಳಿಲ್ಲದ ಮರುಳು. ಅರಿವಿಲ್ಲದ ಅರಿವು*
*ಬಸವಪ್ರಿಯ ಕೂಡಲ ಚೆನ್ನಸಂಗನ ಶರಣರ ಬರುವು*
*ಕೌತುಕವಾಯಿತ್ತು. ಚಿತ್ತೈಸಯ್ಯ ಸಂಗನ ಬಸವಣ್ಣ'* ಎಂದು

ನಿರೂಪಿಸುತ್ತಾರೆ. ಎಷ್ಟು ಗೌರವದಿಂದ ದೇವ ದೇವಾ! ಎಂದು ಸಂಬೋಧಿಸುತ್ತಾರೆ.

ಆಗ ಬಸವಣ್ಣನವರು ಲಿಂಗಾರ್ಚನೆಯ ಪರಮಸುಖ ದಿಂದ ಏಳನೊಲ್ಲದೆ –

*"ಕೂಡಲಸಂಗನ ಶರಣರು ಬಂದರೆ*
*ಉಪಚಾರಕ್ಕೆ ಇಂಬಿಲ್ಲ*
*ಕರುಣದಿಂದ ಬರಹೇಳಾ ಅಪ್ಪಣ್ಣಾ'* ಎನ್ನುತ್ತಾರೆ.

ಆಗ ಅಪ್ಪಣ್ಣಗಳು ಪ್ರಭುದೇವನನ್ನು ಆಹ್ವಾನಿಸುತ್ತಾರೆ.

*'ಮನಕ್ಕೆ ಮನವೇಕಾರ್ಥವಾಗಿ ಕಾಯಕ್ಕೆ ಕಾಯ*
*ಸಂಬಂಧ ವಾಗಿ ಪ್ರಾಣಕ್ಕೆ ಪ್ರಾಣ ಏಕಾರ್ಥವಾಗಿದ್ದ*
*ವರಲ್ಲಿ ತೆರೆಮರೆ ಎಂಬುದಿಲ್ಲ ನೋಡಯ್ಯ*
*ಸಂಗ ನಿಸ್ಸಂಗವಾಗಿಪ್ಪವರಲ್ಲಿ ಉಪಚಾರಕ್ಕಿಂದಿಲ್ಲ ಕೇಳಯ್ಯ*
*ಬಸವಪ್ರಿಯ ಕೂಡಲಚೆನ್ನಸಂಗನ ಶರಣ*

ಬಸವಣ್ಣನಟ್ಟಿದನು ಕೃಪೆ ಮಾಡಾ ಗುರುವೇ'
ಇದನ್ನು ಕೇಳಿ ಬಸವಣ್ಣ ತಾನೇ ಬರದೇ ಉಪಚಾರಕ್ಕಿಂಬಿಲ್ಲ ಎಂದು ಹೇಳಿದನಲ್ಲ ಎಂದು ಕೋಪಗೊಂಡರು.

'ಲಿಂಗದ ಕೈಯಲಿ ಶ್ರೇಯಿರಲು
ಮಾತಿನ ಅದ್ವೈತವೇನಪ್ಪುದೋ
ಆಗಾಗದ ಮುನ್ನ ತಾನಾದೆನೆಂಬವರಲ್ಲಿಗೆ
ನಮ್ಮ ಗೋಗೇಶ್ವರ ಲಿಂಗವು ಅಡಿಯುಡುವನಲ್ಲ' ಎನ್ನುವರು.

ಹೀಗೆ ಪರಸ್ಪರ ವಾಗ್ಯುದ್ಧ, ಬಸವಣ್ಣ–ಅಲ್ಲಮರ ನಡುವೆ ಅಪ್ಪಣ್ಣನವರ ಮುಖಾಂತರ ನಡೆದಾಗ, ಅಪ್ಪಣ್ಣ ಎಚ್ಚರ ತಪ್ಪದೇ ವರ್ತಿಸಿದ್ದರಿಂದ, ಪ್ರಭುದೇವರೇ ಸ್ವತಃ ಆಗಮಿಸಿದ್ದಾರೆ ಎಂದು ತಿಳಿದು ಪ್ರಭುದೇವರನ್ನು ಕರೆತರುವರು. ತನ್ನಳವಲ್ಲ ಎಂದು ಅರ್ಥ ಮಾಡಿಕೊಂಡು ಅಪ್ಪಣ್ಣ ಬಸವಣ್ಣನವರನ್ನು ನೀವೇ ಹೋಗಿ ಬಿಜಯಂಗೈಸಿ ಎನ್ನ ಮಾತಿಂಗೆ ಬಾರರು ಎಂದು ಈ ರೀತಿ ನಿವೇದಿಸಿ ಕೊಳ್ಳುವರು.

'ನಿನ್ನಳವಲ್ಲ ಎನ್ನಳವಲ್ಲ ಇದಾರಳವಲ್ಲದ ಘನವು
ನೋಡಯ್ಯಾ
ಕಾಬರೆ ಕಂಗಳಿಗಸಾಧ್ಯ,
ಮುಟ್ಟುವರೆ ಸೋಂಡಿಗಸಾಧ್ಯ
ಮಾತಾಡಿಸಿ ನೋಡುವರೆ ವಾಙ್ಮನೋತೀತ
ನಿಂದರೆ ನೆಳಲಲ್ಲಿ ಸುಳಿದರೆ ಹೆಜ್ಜೆಯಿಲ್ಲ
ಪ್ರಭುದೇವರೆಂಬ ಭಾವ ತೋರುತ್ತಿದೆ
ಬಸವಪ್ರಿಯ ಕೂಡಲಸಂಗನ ಶರಣರ
ಚರಣ ವಿಡಿವರೇಳ ಸಂಗನ ಬಸವಣ್ಣ' ಎಂದು ಪ್ರಭುದೇವರ ವ್ಯಕ್ತಿತ್ವವನ್ನು ವಚನದಲ್ಲಿ ಸೆರೆ ಹಿಡಿದಿದ್ದಾನೆ.

ಪ್ರಭುದೇವರೆಂಬ ಶಬ್ದ ಕಿವಿಗೆ ಬಿದ್ದೊಡನೆ ಬಸವಣ್ಣನವರು ಲಿಂಗಪೂಜೆಯನ್ನು ಬಿಟ್ಟು ಪ್ರಭುದೇವರನ್ನು ಸ್ವಾಗತಿಸಲು ಹೊರಡುವಷ್ಟರಲ್ಲಿ ಚೆನ್ನಬಸವಣ್ಣನವರು ಬಂದು ಪ್ರಭುದೇವರು ಬಂದಿದ್ದಾರೆ ಎಂದು ಅಪ್ಪಣ್ಣನವರ ಮಾತು ಸಮರ್ಥಿಸಿದರು. ಎಲ್ಲರೂ ಪ್ರಭುವಿನಲ್ಲಿ ಕ್ಷಮೆ ಯಾಚಿಸಿ ಪ್ರಭುವನ್ನು ಬರಮಾಡಿಕೊಂಡರು. ಅಪ್ಪಣ್ಣನವರ ನಿಶಿತಮತಿ, ಬುದ್ಧಿ ಸೂಕ್ಷ್ಮತೆ ಆಳವಾದ ಅರಿವು ಪ್ರಭುವನ್ನು ಗುರುತಿಸಲು ಸಾಧ್ಯವಾಯಿತು. ಕೆಲಕಾಲ ಕಲ್ಯಾಣದಲ್ಲಿ ಇದ್ದು ನಂತರ ದೇಶ ಸಂಚಾರ ಮಾಡಿ ಪುನಃ ಕಲ್ಯಾಣಕ್ಕೆ ಬರುವಾಗ, ಅವರ ಬರುವನ್ನು ಪೂರ್ವಭಾವಿಯಾಗಿ ಸೂಚಿಸಿದವರು ಅಪ್ಪಣ್ಣನವರು.

'ಬಯಸುವ ಬಯಕೆ ಕೈಸಾರುವಂತೆ
ನಿಧಿ ನಿಧಾನ ಮನಗೆ ಬಪ್ಪಂತೆ ಪರಿಮಳವನರಸಿ ಬಪ್ಪ
ಭ್ರಮರನಂತೆ ಚಿಂತಾಮಣಿಯ ಪುತ್ಥಳಿ ನಡೆಗಲಿತಂತೆ
ಬಸವಪ್ರಿಯ ಕೂಡಲಚೆನ್ನಸಂಗನಲ್ಲಿ
ಪ್ರಭುದೇವರ ಬರವು ಕಾಣಬರುತ್ತಿದೆ ನೋಡಾ
ಸಂಗನ ಬಸವಣ್ಣ'

ಎರಡನೆಯ ಸಲ ಪ್ರಭುದೇವರು ವೇಷ ಬದಲಾಯಿಸಿ ಬಂದಾಗಲೂ ಅಪ್ಪಣ್ಣನವರು ಗುರುತಿಸುತ್ತಾರೆ.
'ಗುರುಮುಖದಿಂದ ತೋರಿದ ನಿನ್ನ ನಿಲವ ನಿರುಪಮನು'

ವೇಷಧಾರಿ ಜಂಗಮರನ್ನು ಕುರಿತು–
**'ಹೊರವೇಷದ ವಿಭೂತಿ ರುದ್ರಾಕ್ಷಿಯ ತೊಟ್ಟು**
**ಕಾಸು ಹುಲಸಕ್ಕೆ ಕೈಯಾಂತು,**
**ವೇಶಿ ದಾಸಿಯರ ಬಾಗಿಲು ಕಾಯ್ದು**
**ಲೋಕದೊಳಗೆ ಘಾಸಿಯಾಗಿ, ಜಂಗಮ ವೇಷಕ್ಕೆ**
**ಭಂಗವ ಹೊರಿಸಿ**
**ಕಣ್ಣು ಗಾಣದೆ ಜರಿಯ ಬಿದ್ದು, ತಾ ದೂರಿಗೆ ಬಂದು**
**ಈ ಮೂರಕ್ಕೊಳಗಾಗಿ ಗಾರಾಗಿ ಹೋಗುವವರ ವೇಷಕ್ಕೆ**
**ಶರಣಾರ್ಥಿ**
**ಅವರು ಸುತ್ತಿರ್ದ ಪಾಶವ ಕಂಡು ಹೇಸಿತ್ತೆನ್ನ ಮನ**
**ನಿಮ್ಮಂಗೆ ಬಸವಪ್ರಿಯ ಚೆನ್ನಬಸವಣ್ಣ'.**

ಶರಣರ ಬಗ್ಗೆ ಅಭಿಮಾನ ಪ್ರೀತಿ ಗೌರವವನ್ನು –
'ಕೀಡೆ ತುಂಬಿಯ ಬಿಡದೆ ನೆನೆಯೆ
ನೋಡಲಾಕ್ಷಣ ತುಂಬಿಯಾಗಿಹುದು
ರೂಢಿಯೊಳು ಅಗಮ್ಯ ಶರಣರ ಪಾದವೆ ಗೂಡಾಗಿ
ನಿಂದಿರೆ ಬಸವಪ್ರಿಯ ಕೂಡಲ ಚೆನ್ನಬಸವಣ್ಣ'.

ಶರಣರೆಂದರೆ ಯಾರು ಎಂಬುದನ್ನು –
'ಪರಮಜ್ಞಾನ ಎಂಬ ಉರಿಮನೆ ಉಟ್ಟು, ಉರಿಯನೆ
ತೊಟ್ಟು, ಉರಿಯನೆ ಉಂಡು, ಉರಿಯನೆ ಹಾಸಿ,
ಉರಿಯನೆ ಹೊದ್ದು ನಿರವಯಲಾದ ಶರಣಂಗೆ
ನರರುಗಳು ಸರಿ ಎನಬಹುದೆ? ಹರಿಗೆ ಕರಿ
ಸರಿಯೇ? ಉರಗಕ್ಕೆ ಒಳ್ಳೆ ಸರಿಯೇ ಮರುಗಕ್ಕೆ ಗರಗ
ಸರಿಯೇ? ಇಂತೀ ನಿರ್ವಲಯಲಾದ ಶರಣಂಗೆ
ಮರ್ತ್ಯದ ನರಗುರಿಗಳು ಸರಿ ಎಂದರೆ
ನಾಯಕ ನರಕದಲ್ಲಿಕ್ಕುವ ಬಸವಪ್ರಿಯ ಕೂಡಲಚೆನ್ನಬಸವಣ್ಣ'
'ಅಯ್ಯಾ ನಿಮ್ಮ ಶರಣರು ವೇಷವ ತೋರಿ
ಗ್ರಾಸವ ಬೇಡುವವರಲ್ಲ ಲೇಸಾಗಿ ನುಡಿದವರು
ಆಸೆಯಿಲ್ಲದೆ ನಡೆವವರು ರೋಷವಿಲ್ಲದೆ ನುಡಿವವರು'





ಯಾರು ಶೀಲವಂತರು ಯಾವುದು ಶೀಲ ಎಂಬುದಕ್ಕೆ–
'ನೆಲಕೆ ಶೀಲ ಶೀಲವೆಂಬೆನೇ?
ಹೊಲೆ ಹದಿನೆಂಟು ಜಾತಿ ನಡೆದಾಡುವುದಕ್ಕೆ
ಒಂದೇ ಆಯಿತ್ತು, ಜಲಕೆ ಶೀಲವೆಂಬೆನೇ ?
ಮೀನ ಮೊಸಳೆಗಳು ಖಗಮೃಗಂಗಳು ತಿಂದೆಂಜಲು!
ಬೆಳಗೆ ಶೀಲವೆಂಬೆನೇ !
ಎತ್ತು ಕತ್ತೆ ತಿಂದು ಮಿಕ್ಕ ಎಂಜಲು !
ಹೆಣ್ಣಿಗೆ ಶೀಲವೆಂಬೆನೇ ! ಕಣ್ಣುಗೆಡಿಸಿ ಕಾಡತಿಪ್ಪದು !
ಇನ್ನಾವುದು ಶೀಲ ಹೇಳಿರಣ್ಣ? ಇದಕೆ ಒಳಗಾದವರೆಲ್ಲ
ದುಃಶೀಲರು ಇದು ಹಿಡಿದು ಹಿಡಿಯದೇ ಬಿಟ್ಟು ಬಿಡದೇ
ತನ್ನ ಮನಕ್ಕೆ ಶೀಲವಾಗಿಪ್ಪದೇ ಅಚ್ಚಶೀಲ ಕಾಣಾ
ಬಸವಪ್ರಿಯ ಕೂಡಲ ಚೆನ್ನಬಸವಣ್ಣ'.

ಹಡಪದ ಅಪ್ಪಣ್ಣನವರ ಪತ್ನಿ ಲಿಂಗಮ್ಮ 'ಹಡಪದ ಅಪ್ಪಣ್ಣನೇ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡನು. ಚೆನ್ನಮಲ್ಲೇಶ್ವರನೇ ಎನ್ನ ಮನಸ್ಥಲಕ್ಕೆ ಪ್ರಾಣವಾಗಿ ಬಂದು ಮೂರ್ತಿಗೊಂಡನು' ಎಂದಿದ್ದಾಳೆ. ಇವಳ ೧೧೩ ವಚನಗಳು ಲಭ್ಯವಾಗಿವೆ. ಎರಡು ಕೃತಿಗಳು– ಸ್ವರವಚನ ಮತ್ತು ಮಂತ್ರಗೋಪ್ಯ ಸಹ ಲಭ್ಯವಾಗಿವೆ. 'ಅಪ್ಪಣ್ಣ ಪ್ರಿಯ ಚೆನ್ನಬಸವಣ್ಣ' ಇವಳ ಅಂಕಿತನಾಮ. ಈಕೆಯ ವಚನಗಳನ್ನು 'ಬೋಧೆಯ ವಚನಗಳು' ಎನ್ನುತ್ತಾರೆ. ಮನದ ಚಂಚಲತೆಯ ನಿವಾರಣೆಗೆ ಶರಣರ ಸಂಗ ಅವಶ್ಯ ಎನ್ನುತ್ತಾಳೆ. ಅವರ ಸಂಗ ಸಂಸ್ಕಾರದಿಂದ 'ಗಾಳಿ ಬೀಸದ ಜಲದಂತೆ, ಮೋಡ ವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ, ಮನ ನಿರ್ಮಲವಾದಲ್ಲದೇ ಮಹಾಘನವ ಕಾಣಬಾರದು'. ಇದು ಲಿಂಗಮ್ಮನ ಸರಳ ಬೋಧನೆ. ಪತಿಯ ವಚನದಂತೆ ಕೆಲವು ಬೆಡಗಿನ ವಚನಗಳನ್ನು ಬರೆದಿದ್ದಾಳೆ. ಈಕೆ ಕಾಯಕ ತತ್ತ್ವ ಪ್ರಚಾರಕಳು. ತನ್ನ ವಚನಗಳಲ್ಲಿ 'ನಿರಾಳ ಲಿಂಗ' 'ಬಟ್ಟ ಬಯಲು' ಮಹಾಬೆಳಗು, ಬಯಲದೇಹ, ಮರವೆ, ಬಚ್ಚ ಬರಿಯ ಬೆಳಗು ಮುಂತಾದ ಶರಣತತ್ತ್ವ ಪರಿಭಾಷಾ ಪದಗಳನ್ನು ಬಳಸಿದ್ದಾಳೆ. ಸಾಮಾನ್ಯ ಸ್ತರದ ಸ್ತ್ರೀ ಇಂಥ ಆಧ್ಯಾತ್ಮ ಸಿದ್ಧಿಯನ್ನು ಕಂಡಾಗ ಆಶ್ಚರ್ಯ ಉಂಟಾಗುವುದು. ಅವಳ ಒಂದು ವಚನ ಈ ರೀತಿ ಇದೆ.

'ಕನಿಷ್ಠದಲ್ಲಿ ಹುಟ್ಟಿದೆ ಉತ್ತಮದಲ್ಲಿ ಬೆಳೆದೆ
ಸತ್ಯ ಶರಣರ ಪಾದವಿಡಿದೆ ಆ ಶರಣರ ಪಾದವಿಡಿದು
ಗುರುವ ಕಂಡೆ, ಲಿಂಗವ ಕಂಡೆ ಜಂಗಮವ ಕಂಡೆ
ಪಾದೋದಕ ಕಂಡೆ ಪ್ರಸಾದವ ಕಂಡೆ
ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ ಹರಿಯಿತ್ತು
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ
ಮಂಗಳದ ಮಹಾಬೆಳಗಿನೊಳಗಣ ಓಲಾಡಿ
ಸುಖಿಯಾದೆನು ಅಯ್ಯಾ ಅಪ್ಪಣ ಪ್ರಿಯ
ಚನ್ನಬಸವಣ್ಣ'

ಬಸವಣ್ಣನವರು ಕಲ್ಯಾಣದಿಂದ ಸಂಗಮಕ್ಕೆ ಹೊರಟು ನಿಂತಾಗ ಅಪ್ಪಣ್ಣ ಅವರನ್ನು ಹಿಂಬಾಲಿಸಿದನು. ಅತ್ತ ಕಲ್ಯಾಣದಲ್ಲಿ ಪುರೋಹಿತ ವರ್ಗ ಮತ್ತು ಶಿವಶರಣರ ನಡುವೆ ಭಾರಿ ಗದ್ದಲ ಉಂಟಾಗುತ್ತದೆ. ಅದರಿಂದ ಕಳವಳಗೊಂಡ ಬಸವಣ್ಣನವರು ತಮ್ಮ ಮಡದಿ ನೀಲಾಂಬಿಕೆಯನ್ನು ಕರೆತರಲು ಅಪ್ಪಣ್ಣನವರನ್ನು ಕಳಿಸುತ್ತಾರೆ. ಯಾರ ಕಣ್ಣಿಗೂ ಕಾಣದಂತೆ ಮಹಾಮನೆಯನ್ನು ತಲುಪಿ ನೀಲಾಂಬಿಕೆಗೆ ಅಣ್ಣನ ಸಂದೇಶ ಮುಟ್ಟಿಸುತ್ತಾರೆ. ನೀಲಾಂಬಿಕೆ –ಅಲ್ಲಿರ್ಪ ಸಂಗಯ್ಯ ಇಲ್ಲಿಲ್ಲವೇ? ಬಸವಣ್ಣ ತನ್ನೊಡನೆ ತೆರಹಿಲ್ಲದಂತೆ ಇರುವಾಗ ನಾನು ಎಲ್ಲಿದ್ದರೇನು? ಪರಿಣಾಮ ಮೂರ್ತಿ ಬಸವನ ರೂಪುವೆನ್ನ ಕರಸ್ಥಲದಲ್ಲಿ ಬೆಳಗಿನ ಬಳಿಕೆ ಸಂಗಯ್ಯನ ಹಾಗೂ ನಮಗೇತಕ್ಕೆ ಎಂದು ಪ್ರಶ್ನಿಸಿದಳು. ಕೊನೆಗೂ ಅಣ್ಣನ ಆಜ್ಞೆ, ನೀಲಾಂಬಿಕೆಯ ನಿರಾಕರಣನೆ, ಕಲ್ಯಾಣದ ಭೀಕರತೆ ಈ ವಿಪತ್ತುಗಳ ಮಧ್ಯೆ ಅಪ್ಪಣ್ಣ ತನ್ನ ಸೇವಾ ಸಂಜನಿತ ಆತ್ಮೀಯತೆಯಿಂದ ಸಂಗಮಕ್ಕೆ ಕರೆದುಕೊಂಡು ಹೊರಟ. ಅಪ್ಪಣ್ಣ ನೀಲಮ್ಮನೊಂದಿಗೆ ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಬಸವಣ್ಣ ನವರ ಐಕ್ಯದ ಸುದ್ಧಿ ತಲುಪುತ್ತದೆ. ಆಗ ತಂಗಡಿಗೆಯ ನದಿ ತೀರದಲ್ಲಿ ನೀಲಮ್ಮ ಉದ್ವೇಗದಿಂದ ಶಿವಪೂಜೆಗೆ ಕುಳಿತು 'ಸಂಗಮನಾಥನೇ ಈತನೆಂದು ಎನ್ನಂಗೈಯ ಲಿಂಗ' ಎಂದು ಲಿಂಗೈಕ್ಯಳಾಗುತ್ತಾಳೆ. ಹಡಪದ ಅಪ್ಪಣ್ಣ ಪ್ರಲಾಪಿಸುತ್ತ –

'ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು
ಎನ್ನ ಮನ ನಿಮ್ಮ ನೆನಹಿನಲ್ಲಿ ಸವೆದು
ಎನ್ನ ಅರಿವು ನಿಮ್ಮ ಘನದೊಳಗೆ ಸವೆದು
ನಿಶ್ಚಲ ನಿಜೈಕ್ಯವಾಗಿ ಬಸವ ಪ್ರಿಯ ಕೂಡಲ ಚೆನ್ನಸಂಗಯ್ಯ
ನೀನಾರೆಂಬುದು ಏನಾಯಿತ್ತೆಂದರಿಯೆ'

ಎಂದು ಅವರೂ ಅಲ್ಲಿಯೇ ಲಿಂಗದೊಳಗಾದನು. ಇವರ ಕುರುಹಾಗಿ ತಂಗಡಿಗೆಯಲ್ಲಿ ಪೂರ್ವಕ್ಕೆ ನೀಲಾಂಬಿಕೆ ಮತ್ತು ಪಶ್ಚಿಮಕ್ಕೆ ಅಪ್ಪಣ್ಣನ ದೇವಾಲಯಗಳು ಇವೆ. ಅಪ್ಪಣ್ಣನ ದೃಢ ಸಂಕಲ್ಪ, ಬಸವಣ್ಣನ ಮೇಲಿನ ನಿಷ್ಠೆ ವ್ಯಕ್ತವಾಗುವುವು. ಬನವಾಸಿಯ ಮಧುಕೇಶ್ವರ ದೇವಾಲಯದ ಶಿವೋತ್ಸವ ಮಂಟಪದ ಗಗ್ಗರಿಕಲ್ಲಿನಲ್ಲಿ ಅಪ್ಪಣ್ಣನ ವಿಗ್ರಹವನ್ನು ಕಾಣಬಹುದಾಗಿದೆ.

❋

# ಇಷ್ಟಲಿಂಗದ ಮಹತ್ವ– ಏಕದೇವೋಪಾಸನೆ

–ಜಿ.ಎಲ್. ಮಂಜುನಾಥ್, ನಂ. ೩೪೦, 'ಪರಂಜ್ಯೋತಿ', ೩ನೇ ಮುಖ್ಯ, ೮ನೇ ಅಡ್ಡರಸ್ತೆ, ಸರಸ್ವತಿನಗರ, ಬೆಂಗಳೂರು.

ಇಷ್ಟಲಿಂಗವು ಪರಶಿವನ ಕುರುಹು; ಲಿಂಗಾಯತ (ವೀರಶೈವ) ಧರ್ಮದ ಲಾಂಛನ. ನಮಗೆ ಇಳೆ, ಬೆಳೆ, ಜಲ, ವಾಯು, ಅಗ್ನಿ ಆದಿಯಾಗಿ ಸಕಲ ಸಂಪತ್ತನ್ನು ನೀಡಿದ ಸೃಷ್ಟಿಕರ್ತ ಶಿವನಿಗೆ(ಭಗವಂತ) ಕೃತಜ್ಞತೆ ಸಲ್ಲಿಸಲು ಮತ್ತು ನಿರಾಕಾರ ದೇವನನ್ನು ಸಾಕಾರ ರೂಪದಲ್ಲಿ ಪೂಜಿಸಲು ಶ್ರೀಗುರು ಬಸವಾದಿ ಶರಣರು ಕಂಡುಕೊಂಡ ಸರಳ ಸಾಧನ. ಅಂಥ ಇಷ್ಟಲಿಂಗದ ಸ್ವರೂಪವನ್ನು ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಹೀಗೆ ಬಣ್ಣಿಸಿದ್ದಾರೆಂಬುದನ್ನು ನೋಡೋಣ:

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ<br>
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ<br>
ಬ್ರಹಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ<br>
ಅಗಮ್ಯ, ಅಪ್ರಮಾಣ, ಅಘೋಚರ, ಅಪ್ರತಿಮ ಲಿಂಗವೇ<br>
ಕೂಡಲಸಂಗಮ ದೇವಾ ನೀವೆನ್ನ ಕರಸ್ಥಲಕೆ ಬಂದು<br>
ಚುಳುಕಾದಿರಯ್ಯ

ಲಿಂಗಾಯತ ಧರ್ಮ ಸಂಸ್ಕಾರದ ರೀತ್ಯಾ ಇಷ್ಟಲಿಂಗವನ್ನು, ಗರ್ಭಸ್ಥ ಶಿಶುವಿಗೆ(ತಾಯಿಯ ಗರ್ಭದ 8ನೇ ತಿಂಗಳಲ್ಲಿ) ಸದ್ಗುರುಗಳ ಹಸ್ತದಿಂದ ಧಾರಣೆ ಮಾಡಿಸಲಾಗುವುದು. ಹೀಗೆ ಧಾರಣೆ ಮಾಡಿದ ಲಿಂಗವನ್ನು ತಾಯಿಯು ಜೋಪಾನವಾಗಿ ತನ್ನ ಲಿಂಗದೊಡನೆ ಕಟ್ಟಿಕೊಂಡಿದ್ದು ಮಗುವು(ಹೆಣ್ಣಿರಲಿ–ಗಂಡಿರಲಿ) ಧರಣಿಯ ಮೇಲೆ ಬಿದ್ದ ತಕ್ಷಣ ಅರ್ಥಾತ್ ಹುಟ್ಟಿದ ತಕ್ಷಣ ಮಗುವಿನ ಕೊರಳಲ್ಲಿ ಧಾರಣೆ ಮಾಡಿದ ಬಳಿಕವೇ ತಾಯಿಯ ಎದೆ ಹಾಲು ಜೇನುತುಪ್ಪವನ್ನು ನೀಡಲಾಗುವುದು. ಈ ಬಗ್ಗೆ ಚಿನ್ಮಯ ಜ್ಞಾನಿ ಚನ್ನಬಸವಣ್ಣನವರು ಏನು ಹೇಳುತ್ತಾರೆ ನೋಡೋಣ.

*ಶಿವಭಕ್ತರ ಶಿಶು ಧರಣಿಯ ಮೇಲೆ ಬಿದ್ದಾಗಲೇ*<br>
*ಶ್ರೀ ವಿಭೂತಿ ಪಟ್ಟವ ಕಟ್ಟಿ, ಕೊರಳಲ್ಲಿ ಲಿಂಗಸಾಹಿತ್ಯವ*<br>
*ಮಾಡಿ ಪಾದೋದಕದಲ್ಲಿ ಜಳಕವ ಮಾಡಿಸುವುದು*<br>
*ಪ್ರಸಾದದೆಣ್ಣೆ ಬೆಣ್ಣೆ ಹಾಲನೆರೆದು ಸಲಹುದು ಆಚಾರ*<br>
*ಮತ್ತಾವ ಭೂತ ಶಾಂತಿಯ ಮಾಡಲಾಗದು*<br>
*ಕೂಡಲಚೆನ್ನಸಂಗಮದೇವಾ*

ತರುವಾಯ ಮಗುವಿಗೆ ತಿಳುವಳಿಕೆ ಬಂದಾಗ ಅಂದರೆ ಸುಮಾರು 8ರಿಂದ 15ನೇ ವಯಸ್ಸಿನೊಳಗೆ ಸದ್ಗುರುಗಳಿಂದ ಇಷ್ಟಲಿಂಗ ದೀಕ್ಷಾಸಂಸ್ಕಾರವನ್ನು ಕೊಡಿಸಿ, ಮಗುವೇ ನೇರವಾಗಿ ಇಷ್ಟಲಿಂಗವನ್ನು ಪೂಜಿಸುವ ಪರಿಪಾಠವನ್ನು ಮಾಡುವುದು ಮತ್ತು ಆ ಮಗುವಿಗೆ ಧರ್ಮದ ಬಗ್ಗೆ ತಿಳುವಳಿಕೆ ನೀಡುವುದು, ಒಳ್ಳೆಯ ನಡೆ–ನುಡಿಗಳನ್ನು ಕಲಿಸುವುದು, ಶರಣರ ವಚನಗಳನ್ನು ಕಂಠಪಾಠ ಮಾಡಿಸುವುದು ಇವೆಲ್ಲ ತಂದೆ ತಾಯಿಗಳ ಆದ್ಯ ಕರ್ತವ್ಯ. ಹೀಗೆ ಮಗುವು ಹುಟ್ಟಿದಾಗ (ಗರ್ಭದಲ್ಲಿದ್ದಾಗಲೇ) ಧರಿಸಿದ ಲಿಂಗವು ಕೊನೆಗೆ ಸತ್ತ ಮೇಲೂ ಸಹ ತನ್ನ ಜೊತೆಯಲ್ಲೇ ಬರುವುದು. (ಸಂಬಂಧಿಕರೆಲ್ಲ ಸಮಾಧಿಯವರೆಗೆ ಬರುವರು ಅಷ್ಟೆ) ಇದು ಶರಣ ಧರ್ಮದ(ಲಿಂಗಾಯತ) ವೈಶಿಷ್ಟ್ಯ ಮತ್ತು ಅತ್ಯಂತ ಪವಿತ್ರವಾದ ಸಂಸ್ಕಾರ ಕಾರ್ಯ.

ಇಷ್ಟಲಿಂಗವನ್ನು, ಹೆಣ್ಣಾಗಲಿ, ಗಂಡಾಗಲಿ ತನ್ನ ಎದೆಯ ಮೇಲೆಯೇ ಧರಿಸಬೇಕು, ಜೀವಾತ್ಮನ ಸನಿಹದಲ್ಲೇ ಪರಮಾತ್ಮನ ಕುರುಹು ಇರಬೇಕೆಂಬುದು ಶರಣರ ಅಭಿಮತ. ಅದನ್ನು ಬಿಟ್ಟು ತಮಗೆ ಇಷ್ಟ ಬಂದಲ್ಲಿ ಧರಿಸುವುದು ಸೂಕ್ತವಲ್ಲ. ಶಿವ ಸಾಕ್ಷಾತ್ಕಾರ ಪಡೆಯ ಬಯಸುವವರು ಯಾರೇ ಆಗಲಿ, ಇಷ್ಟಲಿಂಗವನ್ನು ದೀಕ್ಷಾ ಸಂಸ್ಕಾರದ ಮೂಲಕ ಶ್ರೀ ಸದ್ಗುರುವಿನಿಂದ ಪಡೆದು ಪೂಜಿಸಬಹುದು. ಅಂಥ ಇಷ್ಟಲಿಂಗಪೂಜೆ ಕೂಡ ಬಹಳ ಸರಳ ಮತ್ತು ಸುಲಭ. ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಸರಳ ಪೂಜೆಯ ಬಗ್ಗೆ ಬಹಳ ಮಾರ್ಮಿಕವಾಗಿ ನುಡಿಯುತ್ತಾರೆ;

*ಕುರಿಬೇಡ, ಮರಿ ಬೇಡ, ಬರಿಯ ಪತ್ರೆಯ ತಂದು*<br>
*ಮರೆಯದೆ ಪೂಜಿಸು ಕೂಡಲಸಂಗಮದೇವನ*

ಇಷ್ಟಲಿಂಗಪೂಜೆಗೆ ಯಾವ ಪಂಚಾಮೃತದ ಅಭಿಷೇಕವಾಗಲಿ, ಇಂಥದ್ದೇ ಪತ್ರೆ, ಇಂಥದ್ದೇ ಪುಷ್ಪ, ಇಂಥದ್ದೇ ನೀರು ಆಗಬೇಕೆಂಬ ನಿಬಂಧನೆಯಿಲ್ಲ. ಹೂಗಿಡಗಳಿಗೆ ನೋವಾಗುತ್ತದೆಂದು ಅರಳಿ ಬಿದ್ದ ಹೂವುಗಳನ್ನು ತಂದು ಪೂಜಿಸಿದ ಶರಣರು ಅನೇಕರುಂಟು. ಭಕ್ತಿಯಿಂದ, ಶ್ರದ್ಧೆಯಿಂದ, ನಿಷ್ಠೆಯಿಂದ ನಿತ್ಯವೂ ತಪ್ಪದೇ ಪವಿತ್ರ ಸ್ಥಳದಲ್ಲಿ, ಪ್ರಶಾಂತ ವಾತಾವರಣದಲ್ಲಿ ಒಂದು ಗೊತ್ತಾದ ಕಾಲದಲ್ಲಿ





ಇಷ್ಟಲಿಂಗದ ಪೂಜೆಯನ್ನು ಮಾಡಿದಲ್ಲಿ ಪೂಜೆಯ ಫಲ ಅಪಾರವೆಂಬುದು ಶರಣರ ಅಭಿಮತ. ಪೂಜೆಗೆ ಆ ದಿಕ್ಕು ಈ ದಿಕ್ಕು ಶ್ರೇಷ್ಠವೆಂಬುದಿಲ್ಲ. ಪರಮಾತ್ಮನು ಸರ್ವವ್ಯಾಪಿ, ಸರ್ವಾಂತರ್ಯಾಮಿ. ಅವನಿಲ್ಲದ ಸ್ಥಳವೇ ಇಲ್ಲ. ಅವನನ್ನು ಕಾಣಲು ಪರಿಶುದ್ಧವಾದ ಮನಸ್ಸು ಮತ್ತು ಹೃದಯ ಬೇಕು ಅಷ್ಟೆ. ಸರ್ವಾಂಗ ಶುದ್ಧಿಯಾಗಿ ಭಾವ ತುಂಬಿ, ಭಕ್ತಿ ತುಂಬಿ ಪೂಜಿಸಬೇಕು. ಆ ಪೂಜೆಯ ಬಗೆಯನ್ನು ಜಗನ್ಮಾತೆ ಅಕ್ಕಮಹಾದೇವಿಯವರು ಹೇಗೆ ಬಣ್ಣಿಸಿದ್ದಾರೆಂಬುದನ್ನು ನೋಡೋಣ;

***ತನು ಕರಗದವರಲ್ಲಿ ಮಜ್ಜನನವನೊಲ್ಲೆಯಯ್ಯ ನೀನು***<br>
***ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು***<br>
***ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯ ನೀನು***<br>
***ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯ ನೀನು***<br>
***ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯ ನೀನು***<br>
***ಪರಿಣಾಮಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯ ನೀನು***<br>
***ತ್ರಿಕರಣಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯ ನೀನು***<br>
***ಹೃದಯಕಮಲ ಶುದ್ಧವಿಲ್ಲದವರಲ್ಲಿ ಇರಲೊಲ್ಲೆಯಯ್ಯ ನೀನು***<br>
***ಎನ್ನಲ್ಲಿ ಏನುಂಟೆಂದು ಎನ್ನ ಕರಸ್ಥಲವನಿಂಬುಗೊಂಡೆ ಹೇಳಾ***<br>
***ಚೆನ್ನಮಲ್ಲಿಕಾರ್ಜುನಯ್ಯ***

ಇಷ್ಟಲಿಂಗದ ಪೂಜೆಯನ್ನು ತ್ರಿಕಾಲದಲ್ಲಿ(ಬೆಳಿಗ್ಗೆ, ಮಧ್ಯಾಹ್ನ, ಸಂಜೆ) ಮಾಡಿದರೆ ಉತ್ತಮ, ದ್ವಿಕಾಲ ಮಾಡಿದರೆ ಮಧ್ಯಮ, ಏಕಕಾಲ ಮಾಡಿದರೆ ಕನಿಷ್ಠ ಎಂದು ಹೇಳುತ್ತಾರೆ ಶರಣರು. ಕನಿಷ್ಟ ಬೆಳಿಗ್ಗೆ ಒಂದು ಹೊತ್ತಾದರೂ ಮಿಂದು ಮಡಿಯುಟ್ಟು ಲಿಂಗಪೂಜೆ ಮಾಡುವ ಪರಿಪಾಠವನ್ನು ಮಕ್ಕಳು ಚಿಕ್ಕಂದಿನಿಂದಲೇ ಅಂದರೆ 8ನೇ ವರ್ಷ, ಇಲ್ಲವೇ ೧೨–೧೫ನೇ ವರ್ಷದಿಂದಲಾದರೂ ಬೆಳೆಸಿಕೊಳ್ಳಬೇಕು. ಇಷ್ಟಲಿಂಗ ಪೂಜೆ/ಶಿವಯೋಗ ಸಾಧನೆಯಿಂದ(ಪೂಜೆ, ಪ್ರಾರ್ಥನೆ, ಜಪ, ಧ್ಯಾನ) ಮನಸ್ಸಿನಲ್ಲಿ, ಏಕಾಗ್ರತೆ ಬೆಳೆಯುತ್ತಾ ಹೋಗಿ ಒಳ್ಳೆಯ ವಿದ್ಯೆ, ಬುದ್ಧಿ, ಜ್ಞಾನ ಸಂಪಾದನೆ ಮಾಡಿ ಸುಖ, ಶಾಂತಿ, ನೆಮ್ಮದಿಯಿಂದ ಜೀವನ ನಡೆಸಲು ಸಾಧ್ಯವಾಗುತ್ತದೆ. ಅಲ್ಲದೆ, ನಮ್ಮ ಶರೀರದ ಅನೇಕ ರೋಗ ರುಜಿನಗಳು ಸಹ ದೂರವಾಗುವುವು ಎಂಬುದು ಬಲ್ಲವರೆಲ್ಲರ ಅಭಿಪ್ರಾಯ. ನನ್ನ ಅನುಭವ ಕೂಡ. ಇಷ್ಟಲಿಂಗ ಪೂಜೆಗೆ ಪ್ರಶಸ್ತ ಕಾಲ ಯಾವುದೆಂಬುದನ್ನು ವಿಶ್ವಗುರು ಬಸವಣ್ಣನವರ ವಚನಗಳಲ್ಲಿ ನೋಡೋಣ;

*ಹೊತ್ತಾರೆ ಎದ್ದು ಅಘ್ಪವಣಿ ಪತ್ರೆಯ ತಂದು*<br>
*ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ*<br>
*ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು !*<br>
*ಹೊತ್ತು ಹೋಗದ ಮುನ್ನ ಮೃತ್ಯು ಮುಟ್ಟದ ಮುನ್ನ*<br>
*ತೊತ್ತುಗೆಲಸವ ಮಾಡು ಕೂಡಲಸಂಗಮದೇವನ*

*ಮುಂಜಾವದಲೆದ್ದು ಲಿಂಗದಂಘ್ರಿಯ ಮುಟ್ಟಿ*<br>
*ಸುಪ್ರಭಾತದಲ್ಲಿ ಶಿವಶರಣರ ಮುಖವ ನೋಡುವುದು*<br>
*ಹುಟ್ಟಿದ ಜನ್ಮಕ್ಕೆ ಇದೇ ಸಫಲವು, ಸತ್ಯ ವಚನ*<br>
*ಇಂತೆಂದುದಾಗಿ, ಇಂತಿಲ್ಲದವರನೊಲ್ಲ ನಮ್ಮ*<br>
*ಕೂಡಲಸಂಗಮದೇವ*

ಶರಣರ ದೃಷ್ಟಿಯಲ್ಲಿ ನೋಡಿದಾಗ, ಇಷ್ಟಲಿಂಗಕ್ಕೂ, ಸ್ಥಾವರಲಿಂಗಕ್ಕೂ ಬಹಳಷ್ಟು ಅಂತರ ವ್ಯತ್ಯಾಸಗಳನ್ನು ಕಾಣಬಹುದು. ಇಷ್ಟಲಿಂಗವು ಶ್ರೀಗುರುವಿನಿಂದ ದೀಕ್ಷಾ ಸಂಸ್ಕಾರದ ಮೂಲಕ ಭಕ್ತನ ಕರಸ್ಥಲಕ್ಕೆ ಬಂದು ಭಕ್ತನಿಂದಲೇ ನೇರವಾಗಿ ಪೂಜಿಸಲ್ಪಡುತ್ತದೆ. ಸ್ಥಾವರಲಿಂಗವು ಗುಡಿಯಲ್ಲಿ ಸ್ಥಾಪಿಸಲ್ಪಟ್ಟು ಪೂಜಾರಿಯಿಂದ(ಮಧ್ಯವರ್ತಿ) ಪೂಜಿಸಲ್ಪಡುತ್ತದೆ. ಇಷ್ಟಲಿಂಗವನ್ನು ಯಾವಾಗ ಬೇಕಾದರೂ, ಎಷ್ಟು ಹೊತ್ತು ಬೇಕಾದರೂ, ಹೋದಲ್ಲಿ ಬಂದಲ್ಲಿ ಎಲ್ಲಿ ಬೇಕಾದರೂ(ಒಂದು ಗಿಡ–ಮರ, ನದಿ–ಕೆರೆ ದಂಡೆ ಮೇಲೂ ಸಹ) ಕುಳಿತು ಆನಂದವಾಗಿ ಪೂಜಿಸಿ, ಪ್ರಾರ್ಥಿಸಿ, ಧ್ಯಾನಿಸಿ ತೀರ್ಥಪ್ರಸಾದವನ್ನು ಭಕ್ತನೇ ನೇರವಾಗಿ ಪಡೆಯಲು ಬರುತ್ತದೆ. ಅದು ಕೈಗಡಿಯಾರ ಇದ್ದಂತೆ. ಅದೇ ಸ್ಥಾವರಲಿಂಗವು ಗೋಪುರ ಗಡಿಯಾರ ಇದ್ದಂತೆ. ಒಂದು ನಿಯತ ಕಾಲದಲ್ಲಿ, ಪೂಜಾರಿಯ ಮೂಲಕ ಮಾತ್ರ ಭಕ್ತನು ಪೂಜೆ, ಪ್ರಾರ್ಥನೆ ಸಲ್ಲಿಸಿ ತೀರ್ಥ ಪ್ರಸಾದ, ದರ್ಶನ ಪಡೆಯುವ ಅವಕಾಶವಿರುತ್ತದೆ. ಅದಕ್ಕೂ ಕೆಲವು ಕಡೆ ಗಂಟೆಗಟ್ಟಲೆ, ದಿನಗಟ್ಟಲೆ ಚಳಿ–ಮಳೆ–ಬಿಸಿಲಿನಲ್ಲಿ ಸಾಲುಗಟ್ಟಿ ನಿಂತು ಕಾಯುವ ಪರಿಸ್ಥಿತಿಯನ್ನು ಇಂದಿನ ದಿನಮಾನಗಳಲ್ಲಿ ಎಲ್ಲರೂ ಬಲ್ಲವರಾಗಿದ್ದೇವೆ. ಇದನ್ನೆಲ್ಲ ಮನಗಂಡ ಬಸವಾದಿ ಶರಣರು ಇಷ್ಟಲಿಂಗವಿದ್ದಂತೆ ಸ್ಥಾವರಲಿಂಗಕ್ಕೆ ಶರಣೆನಬಾರದೆಂದು ಕಟ್ಟಪ್ಪಣೆ ವಿಧಿಸಿದ್ದಾರೆ. ಅಲ್ಲದೆ, ಸ್ಥಾವರಕ್ಕೆ ಶರಣನೆನುವವರನ್ನು ಅಂಬಿಗರ ಚೌಡಯ್ಯನವರು, ಮಡಿವಾಳ ಮಾಚಿದೇವರು ಮುಂತಾದ ಶರಣರು ಬಹಳ ಕಟುವಾಗಿ ಟೀಕಿಸಿದ್ದಾರೆ;

*ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ*<br>
*ಹೊಟ್ಟಡಿಯಾಗಿ ಬೀಳುವ ತೊಟ್ಟಿ ಮೂಳನ ಕಂಡಡೆ*<br>
*ಮೆಟ್ಟಿದ ಎಡಪಾದರಕ್ಷೆಯ ತಗೊಂಡು ಲಟಲಟನೆ ಹೊಡಿ*<br>
*ಎಂದಾತ ನಮ್ಮ ಅಂಬಿಗರ ಚೌಡಯ್ಯ ನಿಜಶರಣ*

ಹಾಗಾದರೆ, ಇಷ್ಟಲಿಂಗ ಇಲ್ಲದವರು ಏನು ಮಾಡ

ಬೇಕೆಂದು ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ ಅಲ್ಲವೆ? ಹೌದು ಇಷ್ಟಲಿಂಗವಿಲ್ಲದವರು(ಲಿಂಗಾಯತರಲ್ಲದವರು) ತಮ್ಮ ತಮ್ಮ ಇಷ್ಟದೈವವನ್ನು ಶ್ರದ್ಧಾಭಕ್ತಿಯಿಂದ ಪೂಜಿಸಿ ಫಲ ಪಡೆಯಬಹುದು. ಶರಣರದು ಏಕದೇವೋಪಾಸನೆಯ ಸಿದ್ಧಾಂತ. ಬಹುದೇವೋಪಾಸನೆಯನ್ನು ಅವರು ಒಪ್ಪುವುದಿಲ್ಲ. ಉದಾಹರಣೆ ನಮಗೆ ನೀರಿನ ಅವಶ್ಯಕತೆಗಾಗಿ ಮನೆಯ ಮುಂದೆ ಒಂದು ಕೊಳವೆ/ತೆರೆದ ಬಾವಿಯನ್ನು ಆಳವಾಗಿ ತೋಡಿದರೆ ನೀರು ಲಭ್ಯವಾಗುತ್ತದೆ. ಅದು ಬಿಟ್ಟು ನೂರಾರು ಗುಂಡಿಗಳನ್ನು ತೋಡಿದರೆ ಹೇಗೆ ನಿಷ್ಪ್ರಯೋಜಕವೋ ಹಾಗೆ ಬಹುದೇವೋಪಾಸನೆ ಕೂಡ ನಿಷ್ಪ್ರಯೋಜಕ ಎಂಬುದನ್ನು ಮನಗಂಡ ಶರಣರೆಲ್ಲರು ಏಕದೇವೋಪಾಸನೆಗೆ ಅಪಾರ ಒತ್ತು ನೀಡಿದ್ದಾರೆ. ಇದೇ ವಿಚಾರವನ್ನು ಶ್ರೀ ಸ್ವಾಮಿ ವಿವೇಕಾನಂದರು ಸಹ ಒತ್ತಿ ಹೇಳಿದ್ದಾರೆ.

ಲಿಂಗಾಯತರಿಗೆ(ವೀರಶೈವರಿಗೆ) ಇಷ್ಟಲಿಂಗವೇ ಏಕದೇವೋಪಾಸಕ ವಸ್ತು ಸಾಧನ. ನಿರಾಕಾರ ದೇವರ ಸಾಕಾರ ಮೂರ್ತಿ. ಪರಶಿವನ ಕುರುಹಾದ ಇಷ್ಟಲಿಂಗದ ಮಹತ್ವದ ಬಗ್ಗೆ ಮಕ್ಕಳಿಗೆ ತಿಳುವಳಿಕೆ ನೀಡುವುದು ಪ್ರತಿಯೊಬ್ಬ ತಂದೆತಾಯಿಗಳ ಮತ್ತು ಗುರುಹಿರಿಯರ ಆದ್ಯ ಕರ್ತವ್ಯ. ಆದರೆ, ಇಂದಿನ ಆಧುನಿಕ ಸಮಾಜದಲ್ಲಿ ತಂದೆ ತಾಯಿಗಳೇ ಇಷ್ಟಲಿಂಗಧಾರಿಗಳಾಗಿರುವುದಿಲ್ಲ. ಕೆಲವು ಮನೆಗಳಲ್ಲಿ ಮನೆಮಂದಿಯ ಪರವಾಗಿ ತಾಯಿ ಮಾತ್ರ ಇಷ್ಟಲಿಂಗಪೂಜಕರಾಗಿರುತ್ತಾರೆ. ಅಥವಾ ಎಲ್ಲರ ಲಿಂಗಗಳನ್ನು ಒಂದಡೆ ಇಟ್ಟು ಮನೆಯಲ್ಲಿ ಯಾರಾದ ರೊಬ್ಬರು ಎಲ್ಲ ಲಿಂಗಗಳನ್ನು ಪೂಜಿಸುತಿರುತಾರೆ. ಇದು ಏನು ಸೂಚಿಸುತ್ತದೆಂದರೆ, ಮನೆಯಲ್ಲಿ ಯಾರದರೊಬ್ಬರು ಎಲ್ಲರ ಪರವಾಗಿ ಊಟ ಮಾಡಿದರೆ ಸಾಕು, ಮನೆಮಂದಿ ಯೆಲ್ಲ ಊಟ ಮಾಡಿದಂತೆ ಆಯಿತು. ಮನುಷ್ಯನಾದವನಿಗೆ ದೇಹದ ಹಸಿವೆಯಂತೆ ಆತ್ಮದ ಹಸಿವೆ ಕೂಡ ಇರುತ್ತದೆ. ಆದ ಕಾರಣ ದೇಹ ಪೋಷಣೆಗೆ ಆಹಾರವನ್ನು ಸೇವಿಸಿದ ಹಾಗೆ ಆತ್ಮಪೋಷಣೆಗೆ ಪ್ರತಿಯೊಬ್ಬರೂ ತಮ್ಮ ತಮ್ಮ ಇಷ್ಟ ಲಿಂಗಪೂಜೆಯನ್ನು ತಾನೇ ಮಾಡಬೇಕೆಂದು ಬಸವಣ್ಣನವರು ಅಪ್ಪಣೆಯಿತ್ತಿದ್ದಾರೆ;

*ತನ್ನಾಶ್ರಯದ ರತಿಸುಖವನು ತಾನುಂಬ ಊಟವನು*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ?*
*ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವನು ತಾ*
*ಮಾಡಬೇಕಲ್ಲದೆ ಬೇರೆ ಮತ್ತೊಬ್ಬರ ಕೈಯಲ್ಲಿ*
*ಮಾಡಿಸಬಹುದೆ? ಕೆಮ್ಮನೆ ಉಪಚಾರಕ್ಕೆ*
*ಮಾಡುವರಲ್ಲದೆ*
*ನಿಮ್ಮನೆತ್ತಬಲ್ಲರು ಕೂಡಲಸಂಗಮದೇವ ?*

ಆಧುನಿಕ ಲಿಂಗಾಯತ ಸಮಾಜದಲ್ಲಿ ಏನಾಗಿದೆ ಯೆಂದರೆ ಈ ಕಾಲದಲ್ಲಿ ಯಾರು ಲಿಂಗವನ್ನು ಕಟ್ಟಿಕೊಂಡು ಪೂಜಿಸುತ್ತಾರೆ? ನಮಗೆ ಪೂಜೆ ಮಾಡಲು ಸಮಯವಲ್ಲ ಎನ್ನುವವರು ಇದ್ದಾರೆ. ದಿನದ ೨೪ ಗಂಟೆಗಳಲ್ಲಿ ೨೪ ನಿಮಿಷ(ಬೆಳಿಗ್ಗೆ ೧೨ ಸಂಜೆ ೧೨) ಕನಿಷ್ಟ ಸಮಯ ಶ್ರೀಲಿಂಗಪೂಜೆಗೆ ಸಿಗುವುದಿಲ್ಲವೆ? ಇನ್ನು ಕೆಲವರು ನಾವು ಹೊರಗಡೆ ಹೋಗುವವರು , ಅಲ್ಲೆಲ್ಲ ಲಿಂಗಕ್ಕೆ ಮೈಲಿಗೆ ಯಾಗುತ್ತದೆ. ಆದ್ದರಿಂದ ನಾವು ಲಿಂಗವನ್ನು ಮನೆಯಲ್ಲಿ ಇಟ್ಟು ಪೂಜಿಸುತ್ತೇವೆಂದು ಹೇಳುವ ಮಡಿವಂತರು ಇದ್ದಾರೆ. ಇಷ್ಟಲಿಂಗಧಾರಿಗಳಿಗೆ ಯಾವುದೇ ಮಡಿ ಮೈಲಿಗೆ, ಪಾತಕ-ಸೂತಕಗಳಿಲ್ಲ, ಲಿಂಗವಂತರು ಪಂಚಸೂತಕ ಗಳನ್ನು ಅನುಸರಿಸಬಾರದು ಎಂದು ಶರಣರು ಸಾರಿ ಸಾರಿ ಹೇಳಿದ್ದಾರೆ.

ಈಗಿನ ಕಲಿತ ಮಕ್ಕಳಿಗಂತೂ ಇಷ್ಟಲಿಂಗದ ಪರಿಜ್ಞಾನವೇ ಇರುವುದಿಲ್ಲ. ಅಲ್ಲದೆ, ಇಷ್ಟಲಿಂಗವನ್ನು ಏಕೆ ಧರಿಸಬೇಕು. ಏಕೆ ಪೂಜಿಸಬೇಕು. ಗುಡಿಗೆ ಹೋಗಿ ನಮಸ್ಕಾರ ಹಾಕಿದರೆ ಸಾಕು ಎಂಬ ಮನೋಭಾವನೆ ಅನೇಕರಲ್ಲಿ ಬೆಳೆಯುತ್ತಿದೆ. ಇನ್ನು ಕೆಲವು ಮಕ್ಕಳಲ್ಲಿ ಹೀಗೂ ಇದೆ. ನಾವಿನ್ನೂ ಮಕ್ಕಳು, ದೊಡ್ಡವರಾದ ಮೇಲೆ ಲಿಂಗ ಧರಿಸಿ ಪೂಜೆ ಮಾಡಿದರಾಯಿತು ಎನ್ನುತ್ತಾರೆ. ಅದಕ್ಕೆ ತಕ್ಕಂತೆ ತಂದೆ ತಾಯಿಗಳು ಸಹ ಅವಿನ್ನೂ ಆಡುವ ಮಕ್ಕಳು, ದೊಡ್ಡವರಾದ ಮೇಲೆ ಪೂಜೆ ಮಾಡುತ್ತಾರೆಂದು ಹೇಳುವವರೇನು ಇಲ್ಲದಿಲ್ಲ. 'ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ'? ಮಕ್ಕಳು ದೊಡ್ಡವರಾಗಲಿ, ಓದಿ ಆಗಲಿ, ಮದುವೆ ಆಗಲಿ, ಮಕ್ಕಳಾಗಲಿ, ಸಂಸಾರದ ಜವಾಬ್ದಾರಿ ಕಳೆಯಲಿ, ಆಮೇಲೆ ಯಾವ ಚಿಂತೆಯೂ ಇರುವುದಿಲ್ಲ. ಆಗ ಪೂಜೆ ಮಾಡೋಣ ಅನ್ನುವಷ್ಟರಲ್ಲಿ ವಯಸ್ಸಾಗಿ, ಮುಪ್ಪಾವರಿಸಿ ಸಾವಿನ ಕಾಲ ಸನಿಹವಾಗಿರುತ್ತದೆ. ಆಗ ಜ್ಞಾನೋದಯವಾದರೆ ಏನು ಪ್ರಯೋಜನ? ಇದನ್ನು ಮನಗಂಡ ಬಸವಣ್ಣನವರು ಏನನ್ನುತ್ತಾರೆಂದರೆ,

*ನೆರೆಕೆನ್ನೆಗೆ ತೆರೆಗಲ್ಲಕೆ, ಶರೀರ ಗೂಡು ಹೋಗದ ಮುನ್ನ*
*ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ*
*ಕಾಲಮೇಲೆ ಕೈಯ ಊರಿ ಕೋಲ ಹಿಡಿಯದ ಮುನ್ನ*





*ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ*
*ಕೂಡಲಸಂಗಮದೇವನ*

ನಾವು ಲಿಂಗಾಯರು/ವೀರಶೈವರು ಎಂದು ಹೇಳಿಕೊಳ್ಳು ತ್ತಾರೆ ಕೆಲವರು. ಆದರೆ ಅವರ ಕೊರಳಲ್ಲಿ ಲಿಂಗವೇ ಇರುವುದಿಲ್ಲ, ಲಿಂಗಪೂಜೆ ಮಾಡುವುದು ಗೊತ್ತಿರುವುದಿಲ್ಲ. ಹುಟ್ಟಿದಾಗ ಕಟ್ಟಿದ ಲಿಂಗ ಅದೆಲ್ಲೋ ಮೂಲೆ ಸೇರಿರುತ್ತದೆ. ಇಂಥ ಅನೇಕ ವಿಪರ್ಯಾಸಗಳು ನಮ್ಮ ಸಮಾಜದಲ್ಲಿ ಇವೆ. ತಂದೆ ತಾಯಿಗಳದ್ದೇ ಈ ಪರಿಸ್ಥಿತಿಯಾದರೆ, ಇನ್ನು ಮಕ್ಕಳನ್ನು ಕೇಳುವುದಕ್ಕಾಗುತ್ತದೆಯೇ? ನಮ್ಮ ಅಪ್ಪ-ಅಜ್ಜ-ಮುತ್ತಜ್ಜ ಲಿಂಗಾಯತರು, ಲಿಂಗಪೂಜೆ ಮಾಡುತ್ತಿದ್ದರು ಅಂದಾಕ್ಷಣ ನಾವು ಕೂಡ ಲಿಂಗಾಯತರು ಎಂದು ಹೇಳಲು ಬರುವುದಿಲ್ಲ. ಏಕೆಂದರೆ, ಉದಾಹರಣೆಗೆ ತಂದೆ ವೈದ್ಯ ವಕೀಲ ಇದ್ದರೆ, ಅವನ ಮಕ್ಕಳೂ ಕೂಡ ವೈದ್ಯ ವಕೀಲ ಎಂದು ಹೇಗೆ ಹೇಳಲು ಬರುವುದಿಲ್ಲವೋ ಹಾಗೆ. ಮಕ್ಕಳು ವೈದ್ಯ ವಕೀಲ ಆಗಬೇಕಾದರೆ ಅವರು ಸಹ ವೈದ್ಯಕೀಯ /ಕಾನೂನು ಪದವಿಯನ್ನು ಪಡೆದು ತರಬೇತಿ ಹೊಂದಬೇ ಕಾಗುತ್ತದೆ. ಅದೇ ರೀತಿ, ಲಿಂಗಾಯತರ ಮಕ್ಕಳು ಲಿಂಗಾ ಯತರಾಗಬೇಕಾದರೆ ಶ್ರೀಗುರುವಿನ ಮೂಲಕ ಇಷ್ಟಲಿಂಗ ದೀಕ್ಷಾ, ಸಂಸ್ಕಾರವನ್ನು ಹೊಂದಬೇಕು ಮತ್ತು ಪ್ರತಿನಿತ್ಯ ತಪ್ಪದೆ ಲಿಂಗಪೂಜೆ ಮಾಡುವುದರ ಜೊತೆಗೆ ಅಂಗ ಗುಣಗಳನಳಿದು ಲಿಂಗಗುಣಗಳನು ಅಳವಡಿಸಿಕೊಳ್ಳುತ್ತಾ ಹೋಗಬೇಕು. ಆಗ ಮಾತ್ರ ಅವರನ್ನು ಲಿಂಗಾಯತರು, ಲಿಂಗಾಯತರ ಮಕ್ಕಳು ಎಂದು ಹೇಳಲು ಬರುತ್ತದೆ.

ಇವತ್ತಿನ ಕಾಲದಲ್ಲಿ, ಇಷ್ಟಲಿಂಗವನ್ನು ಏಕೆ ಧರಿಸಬೇಕು, ಇಷ್ಟಲಿಂಗ ಪೂಜೆಯನ್ನು ಏಕೆ ಮಾಡಬೇಕು, ಪೂಜೆ ಮಾಡಿದಾಕ್ಷಣ ದೇವರೇನು ಪ್ರತ್ಯಕ್ಷನಾಗುತ್ತಾನೆಯೇ ಎಂಬ ಪ್ರಶ್ನೆ ಸರ್ವೇ ಸಾಮಾನ್ಯ. ಇಷ್ಟಲಿಂಗ ನಮ್ಮ ಧರ್ಮದ ಲಾಂಛನ, ಪರಶಿವನ ಕುರುಹು, ನಿರಾಕಾರ ದೇವರನ್ನು ಸಾಕಾರ ರೂಪದಲ್ಲಿ ಪೂಜಿಸಿ ಅರಿವನ್ನು ಪಡೆಯಲು ಇರತಕ್ಕ ಸಾಧನ. 'ಕುರುಹನ್ನೇ ಹಿಡಿದು ಅರಿವು ಪಡೆ' ಎಂದು ಶರಣರು ಅಪ್ಪಣೆ ಕೊಡಿಸಿದ್ದಾರೆ. ಪ್ರತಿಯೊಬ್ಬರ ಆತ್ಮನಲ್ಲಿ ಅಡಗಿರುವ ಪರಮಾತ್ಮನನ್ನು ಕಾಣಲು, ಇಷ್ಟಲಿಂಗವೆಂಬ ಕುರುಹನ್ನು ಹಿಡಿದು, ಪೂಜೆ, ಪ್ರಾರ್ಥನೆ, ಜಪ, ಧ್ಯಾನ ಮಾಡುತ್ತಾ, ದಿವ್ಯಜ್ಞಾನ ಪಡೆಯಲು, ಶಿವಸಾಕ್ಷಾತ್ಕಾರ ಪಡೆಯಲು ಇರತಕ್ಕ ಸರಳ ಸಾಧನ ಇಷ್ಟಲಿಂಗ. ಇಂಥ ಇಷ್ಟಲಿಂಗವನ್ನು ಧರಿಸುವುದು, ಪೂಜಿಸುವುದು ಲಿಂಗಾಯತರ ಸೌಭಾಗ್ಯವೆಂದೇ ಹೇಳಬೇಕು. (ಚರ್ಚ್/ ಮಸೀದಿಗಳಿಗೆ ಪ್ರತಿ ಭಾನುವಾರ/ಶುಕ್ರವಾರ ತಪ್ಪದೇ ಹೋಗಿ ಪ್ರಾರ್ಥನೆ ಸಲ್ಲಿಸುವ ಮತ್ತು ಅವರವರ ಧರ್ಮ ಲಾಂಛನಗಳನ್ನು ಕಡ್ಡಾಯವಾಗಿ ಪ್ರತಿಯೊಬ್ಬರೂ ಧರಿಸುವ ಕ್ರಿಶ್ಚಿಯನ್/ಮುಸ್ಲೀಮರನ್ನು ನೋಡಿ ನಾವು ಕಲಿಯ ಬೇಕಾಗಿದೆ ಎಂದರೆ ತಪ್ಪಾಗಲಾರದು) ಇಷ್ಟಲಿಂಗದಲ್ಲೇನು ದೇವರಿದ್ದಾನೆಯೇ ಎಂದು ಪ್ರಶ್ನಿಸುವುದು ಸಹಜ. ಹಾಲಿನಲ್ಲಿ ತುಪ್ಪವಿದೆ ಎಂದರೆ ಚಿಕ್ಕ ಮಗು ನಂಬುತ್ತದೆಯೇ? ಇಲ್ಲ. ಹಾಲನ್ನು ಕಾಯಿಸಿದಾಗಲೇ ತುಪ್ಪ ಬರುವುದು. ಹಾಗೆಯೇ ಇಷ್ಟಲಿಂಗವನ್ನು ಶ್ರೀಗುರುವಿನಿಂದ ದೀಕ್ಷಾ ಸಂಸ್ಕಾರದ ಮೂಲಕ ಪಡೆದು ಧರಿಸಿ, ಪೂಜಿಸಿ, ಪ್ರಾರ್ಥಿಸಿ, ಧ್ಯಾನಿಸುವುದರ ಜೊತೆಗೆ ತನ್ನಲ್ಲಿರುವ ದುರ್ಗುಣ, ದುಶ್ಚಟ, ದುರಾಲೋಚನೆಗಳನ್ನು ದೂರೀಕರಿಸುತ್ತಾ ಬಂದಾಗ ಆತ್ಮ ಜಾಗೃತಿ ಉಂಟಾಗಿ ತನ್ನಂತರಂಗದಲ್ಲಿಯೇ ಬೂದಿ ಮುಚ್ಚಿದ ಕೆಂಡದಂತಿದ್ದ ಪರಮಾತ್ಮ ಪ್ರಕಾಶಗೊಳ್ಳುತ್ತಾನೆ. ಕರೆದವನ ಕರೆಗೆ ಓಗೊಡುತ್ತಾನೆ. ಅಂಥ ಒಂದು ಅನುಭವ ಅಕ್ಕಮಹಾದೇವಿಯರಿಗಾದಾಗ 'ನನ್ನಲ್ಲಿದ್ದೂ ಇಲ್ಲದಂತಿದ್ದೆ ಯಲ್ಲಯ್ಯ' ಎಂದು ಉದ್ಗರಿಸುತ್ತಾರೆ. ಪರಮಾತ್ಮನನ್ನು ನಂಬಿ ನೆಚ್ಚಿ ಕರೆಯುವ ಬಗ್ಗೆ ಬಸವಣ್ಣನವರು ಏನನ್ನುತ್ತಾರೆಂದರೆ

*ನಂಬರು ನೆಚ್ಚರು ಬರಿದೆ ಕರೆವರು*
*ನಂಬಲರಿಯರೀ ಲೋಕದ ಮನುಜರು*
*ನಂಬಿ ಕರೆದೊಡೆ ಓ ಎನ್ನನೇ ಶಿವನು*
*ನಂಬದೆ ನೆಚ್ಚದೆ ಬರಿದೆ ಕರೆವರ*
*ಕೊಂಬು ಮೆಟ್ಟಿ ಕೂಗೆಂದ ಕೂಡಲಸಂಗಮದೇವ*

ಶರಣ ಧರ್ಮದಲ್ಲಿ (ಲಿಂಗಾಯತ/ವೀರಶೈವ) ಭಕ್ತ ನಾಗಲಿ, ಜಂಗಮನಾಗಲಿ, ಗುರುವಾಗಲಿ, ಪ್ರತಿಯೊಬ್ಬರೂ ಇಷ್ಟಲಿಂಗವನ್ನು ಧರಿಸಿ ಪೂಜಿಸಬೇಕೆಂಬುದು ಕಡ್ಡಾಯ. ಇಷ್ಟಲಿಂಗ ಧಾರಣೆ ಮತ್ತು ಪೂಜೆ ಲಿಂಗಾಯತ ಧರ್ಮ ಜೀವಾಳ. ಅದಕ್ಕೆ ಹೆಣ್ಣು-ಗಂಡೆಂಬ ಲಿಂಗಭೇದ ಇಲ್ಲ, ಜಾತಿ ಭೇದ ಇಲ್ಲ, ಮೇಲು-ಕೀಳೆಂಬ ಭೇದಭಾವ ಇಲ್ಲ, ಬಡವ-ಶ್ರೀಮಂತನೆಂಬ ವರ್ಗಭೇದ ಇಲ್ಲ. ಇಷ್ಟಲಿಂಗ ಧಾರಿಗಳು ನಾವೆಲ್ಲರೂ ಒಂದೇ ಎಂಬ ವಿಶಾಲ ಮನೋ ಭಾವನೆಯನ್ನು ಬೆಳೆಸಿಕೊಂಡು ಉಣುವ, ಕೊಡುವ, ತರುವ ರಕ್ತಸಂಬಂಧ, ಭಕ್ತಿ ಸಂಬಂಧವನ್ನು ಬೆಳೆಸಿ ಕೊಳ್ಳಬೇಕು. ಲಿಂಗಾಯತ ಧರ್ಮದಲ್ಲಿ ಎಲ್ಲ ಸಮಾಜದ (ಜಾತಿಯ) ಜನಾಂಗದವರು ಇದ್ದಾರೆ. ಎಲ್ಲ ಜಾತಿ ಯವರಿಗೂ ಲಿಂಗಾಯತ ಧರ್ಮಪ್ರವೇಶಕ್ಕೆ ಮುಕ್ತ ಅವಕಾಶವಿದೆ. ಅಂದಾಗ 'ಅವಕುಲವಾದರೇನು?' ಅಂಗದ

ಮೇಲೆ ಲಿಂಗವುಳ್ಳವರೆಲ್ಲರನು ಕುಲಜರೆಂಬೆನು' ಎಂಬ ಶರಣ ವಾಣಿ ಯಂತೆ ಲಿಂಗವಂತರೆಲ್ಲರೂ ಸಮಾನ ಭಾವದಿಂದ ಒಂದಾಗಿ ಬಾಳುವ ಬದುಕುವ ಕಲೆಯನ್ನು ಕಲಿತಾಗ ಮಾತ್ರ ಲಿಂಗಾಯತ ಸಮಾಜದಲ್ಲಿ ಒಗ್ಗಟ್ಟು ಮೂಡಿ ಸಮಾಜ ಸದೃಢವಾಗುತ್ತದೆ.

ಯಾವ ಕುಲದವರಾಗಲಿ, ಯಾವ ಜಾತಿಯವರಾಗಲಿ, ಅವರಿಗೆ ದೇವರಲ್ಲಿ ನಿಜವಾದ ಸಾಕ್ಷಾತ್ಕಾರವನ್ನು ಪಡೆಯ ಬಹುದು. ಆ ನಿಟ್ಟಿನಲ್ಲಿ ಸಾಧನೆಗೈದ ಸಹಸ್ರಾರು ಶರಣರು/ಶರಣೆಯರು ಇತಿಹಾಸದ ಪುಟಗಳಲ್ಲಿ ಸೇರಿದ್ದಾರೆ. ಉದಾಹರಣೆಗೆ ಮಡಿವಾಳ ಮಾಚಿದೇವರು, ಹಡಪದ ಅಪ್ಪಣ್ಣನವರು, ಅಂಬಿಗರ ಚೌಡಯ್ಯ, ಮೇದಾರ ಕೇತಯ್ಯ, ನುಲಿಯ ಚಂದಯ್ಯ, ಒಕ್ಕಲಿಗ ಮುದ್ದಣ್ಣ, ಸತ್ಯಕ್ಕ, ಲಿಂಗಮ್ಮ, ಬೋಂತಾದೇವಿ, ಲಕ್ಕಮ್ಮ ಮುಂತಾದವರು. ಯಾರೇ ಆಗಲಿ ಲಿಂಗದೀಕ್ಷಾ ಸಂಸ್ಕಾರ ಹೊಂದಿದ ಬಳಿಕ ಅವರು ಯಾವ ಕಾರಣಕ್ಕೂ ತಮ್ಮ ಪೂರ್ವಾಶ್ರಯದ ಜಾತಿಯನ್ನು ಹೇಳ ಬಾರದು ಮತ್ತು ತಾವು ಹಿಂದೆ ಪೂಜಿಸುತ್ತಿದ್ದ ಯಾವ ದೇವರನ್ನು ಪೂಜಿಸಬಾರದು, ಗುಡಿಗುಂಡಾರಗಳಿಗೆ ಹೋಗಬಾರದೆಂಬುದು ಶರಣ ಸಿದ್ಧಾಂತ. ಲಿಂಗದೀಕ್ಷೆ ನೀಡುವ ಮುನ್ನ ಗುರುಗಳಾದವರು ಬ್ರಾಹ್ಮಣರನ್ನು ಮೂರು ವರ್ಷ, ಕ್ಷತ್ರಿಯರನ್ನು ಆರು ವರ್ಷ, ವೈಶ್ಯರನ್ನು ಒಂಭತ್ತು ವರ್ಷ, ಮತ್ತು ಶೂದ್ರರನ್ನು ಹನ್ನೆರಡು ವರ್ಷ ಪರೀಕ್ಷಿಸಿ ದೀಕ್ಷೆ ನೀಡಬೇಕೆಂದು ಚೆನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಕನಿಷ್ಟ ೧೨ ತಿಂಗಳಾದರೂ ಪರೀಕ್ಷಿಸಿ ದೀಕ್ಷೆ ನೀಡಬೇಕು. ಹೀಗೆ ದೀಕ್ಷೆ ಹೊಂದಿದ ಪ್ರತಿಯೊಬ್ಬರೂ ಗುರುಲಿಂಗಜಂಗಮ ಪ್ರೇಮಿ ಗಳಾಗಿ, ಸತ್ಯ ಸದಾಚಾರಿಗಳಾಗಿ, ಸಹಬಾಳ್ವೆಯನ್ನು ನಡೆಸಬೇಕು. ಗುರುಲಿಂಗಜಂಗಮವೇ ಮನೆದೈವ, ಮನದೈವ, ಕುಲದೈವ ಎಂದು ಅರಿತು ಪೂಜಿಸಬೇಕು. ಅದು ಬಿಟ್ಟು ಪೂರ್ವಾಶ್ರಮದ ವ್ಯಾಮೋಹದಿಂದ ತಮ್ಮ ಮನೆದೈವ, ಕುಲದೈವದ ಹೆಸರನ್ನು ಹೇಳುವುದಾಗಲಿ, ಆ ದೇವರು ಗಳನ್ನು ಪೂಜಿಸುವುದಾಗಲಿ, ಅವುಗಳ ಭಜನೆ, ಪ್ರಾರ್ಥನೆ ಮಾಡುವುದಾಗಲಿ, ತೀರ್ಥಕ್ಷೇತ್ರ ಯಾತ್ರೆ ಮಾಡುವುದಾಗಲಿ, ಗಿಡಮರಗಳನ್ನು ಸುತ್ತುವುದಾಗಲಿ ಖಂಡಿತ ಸಲ್ಲದೆಂದು ಶ್ರೀಗುರು ಬಸವಾದಿ ಶರಣರು ಕಟ್ಟಪ್ಪಣೆ ವಿಧಿಸಿದ್ದಾರೆ.

- ನೀರ ಕಂಡಲ್ಲಿ ಮುಳುಗುವವರು ಮರನ ಕಂಡಲ್ಲಿ ಸುತ್ತುವವರು ನಿಮ್ಮನೆತ್ತಬಲ್ಲರಯ್ಯ?
- ಶ್ರೀಗುರುಕೊಟ್ಟ ಲಿಂಗವ ಕಿರಿದು ಮಾಡಿ ತೀರ್ಥಲಿಂಗವ ಹಿಡಿದು ಮಾಡಿ ಹೋದಾತಂಗೆ ಅಘೋರ ನರಕ ತಪ್ಪದು
- ಶಿವಭಕ್ತನಾದ ಬಳಿಕ ಅನ್ಯದೈವದ ಪೂಜೆ, ಭಜನೆ ಮಾಡಲಾಗದು, ತೀರ್ಥಕ್ಷೇತ್ರಗಳಿಗೆ ಹೋಗಲಾಗದು.
- ಕಾಶಿ, ಕೇದಾರ, ರಾಮೇಶ್ವರ, ಶ್ರೀಶೈಲಕ್ಕೆ ಹೋಗಿ ಬಂದೆನೆಂದು ಪಂಚಮಹಾಪಾತಕರ ಮುಖವ ನೋಡಲಾಗದು.
- ಅನ್ಯದೈವದ ಪೂಜಿಸುವವರ ಸಂಗ ಮದ್ಯ-ಮಾಂಸಾ ಹಾರಿಯ ಸಂಗಕಿಂತಲೂ ಭಂಗ.
- ಶ್ರೀಗುರುಜಂಗಮವೇ ಮನೆದೈವ, ಮನದೈವ, ಕುಲದೈವವೆಂದು ಅರಿತು ಆಚರಿಸಬಲ್ಲಾತನೇ ಅಚ್ಚ ಶರಣ.

ಲಿಂಗಾಯತರು/ವೀರಶೈವರು ಅಂದಮೇಲೆ/ಆದ ಮೇಲೆ ಇಷ್ಟಲಿಂಗಧಾರಿಗಳಾಗಿ ತ್ರಿಕಾಲ/ದ್ವಿಕಾಲ/ಏಕಕಾಲ ವಲ್ಲಾದರೂ (ಒಂದು ಹೊತ್ತಾದರೂ) ಭಕ್ತಿಯಿಂದ ಲಿಂಗವನ್ನು ಪೂಜಿಸಬೇಕು. 'ಹೊತ್ತಾರೆ ಎದ್ದು ಹೊತ್ತು ಹೋಗದ ಮುನ್ನ ಲಿಂಗವ ಪೂಜಿಸಬೇಕು' ಎಂದು ಬಸವಣ್ಣನವರು ಅಪ್ಪಣೆಯಿತ್ತಿರುವಂತೆ ಬರೀ ಪತ್ರೆ ಪುಷ್ಪವ ತಂದು ಭಕ್ತಿ ಭಾವ ತುಂಬಿ ನಿತ್ಯವೂ ತಪ್ಪದೇ ಕನಿಷ್ಟ ೧೦-೧೫ ನಿಮಿಷಗಳ ಕಾಲವಾದರೂ ಏಕಾಗ್ರಚಿತ್ತದಿಂದ ಪೂಜಿಸಬೇಕು. ಪೂಜೆ ಮಾಡುವಾಗ ಸಂಸ್ಕೃತದಲ್ಲೇ ಮಂತ್ರ ಹೇಳಬೇಕೆಂಬ ನಿರ್ಬಂಧವಿಲ್ಲ. ಅಚ್ಚ ಕನ್ನಡದಲ್ಲಿ, ನಾವು ಮಾಡುವ ಪೂಜೆ ನಮಗೆ ಅರ್ಥವಾಗುವ ಹಾಗೆ, ಸರಳ ವಚನ-ಗೀತೆಗಳನ್ನು ಹೇಳಿಕೊಂಡು ಮಾಡಿದರೆ ಸಾಕು. ನಮ್ಮಲ್ಲಿ ಅನೇಕರಲ್ಲಿ ದೇವಭಾಷೆ ಸಂಸ್ಕೃತ ಆದ್ದರಿಂದ ನಾವು ಪೂಜೆ ಮಾಡಬೇಕಾದರೆ ಸಂಸ್ಕೃತ ಕಲಿಯಬೇಕಾಗುತ್ತದೆಂಬ ತಪ್ಪು ತಿಳುವಳಿಕೆ ಇದೆ. ನಾವು ಸಂಸ್ಕೃತ ಕಲಿಯಲಿಲ್ಲ ಪೂಜ ಮಾಡಲಿಲ್ಲ! ಇದನ್ನೆಲ್ಲ ಮನಗಂಡ ಶರಣರು ಆಡುಭಾಷೆ/ನಾಡ ಭಾಷೆಯನ್ನೇ ದೈವಭಾಷೆಯನ್ನಾಗಿಸಿ 'ದಂದಣ ಎನ್ನಲು ದತ್ತಣ ಎನ್ನಿ' ತಪ್ಪಿಲ್ಲ ಎಂದು ಅಚ್ಚ ಕನ್ನಡದಲ್ಲಿಯೇ ತಾವು ಲಿಂಗವನ್ನು ಪೂಜಿಸಿ ಆತ್ಮಸಾಕ್ಷಾತ್ಕಾರ ಪಡೆದು, ಇತರರಿಗೂ ಅದೇ ರೀತಿ ಪೂಜಿಸಲು ತಿಳಿಸಿದರು. (ಇವತ್ತಿನ ದಿವಸ, ಕನ್ನಡ ಪೂಜಾರಿ ಎಂದು ಖ್ಯಾತಿ ಹೊಂದಿರುವ ಹಿರೇಮಗಳೂರು ಶ್ರೀ ಕಣ್ಣನ್ ಅವರೇ ಕನ್ನಡ ಪೂಜೆಗೆ ಸಾಕ್ಷಿ) ಅಂದಿನ ಶರಣರಂತೆ ಇಂದಿನ ಶರಣರು/ಸ್ವಾಮಿಗಳು ಕನ್ನಡದಲ್ಲಿ ಪೂಜಿಸುವವರು ಸಾಕಷ್ಟು ಮಂದಿ ಇದ್ದಾರೆ. ಆ ನಿಟ್ಟಿನಲ್ಲಿ ಸಾಗಿ ನಾವು ಸಹ ಕನ್ನಡದಲ್ಲೇ ಇಷ್ಟಲಿಂಗಪೂಜೆ





ಮಾಡುವುದನ್ನು ಕಲಿತು ಆತ್ಮಸಾಕ್ಷಾತ್ಕಾರ ಪಡೆದುಕೊಳ್ಳಲು ಪ್ರಯತ್ನಿಸೋಣ.

ಲಿಂಗವಂತರಾದವರು ಗುರುಲಿಂಗಜಂಗಮ ಪ್ರೇಮಿ ಗಳಾಗಿದ್ದು ಇಷ್ಟಲಿಂಗವ ಬಿಟ್ಟು ಬೇರೆ ದೇವರ ಪೂಜೆ, ಭಜನೆ, ಪ್ರಾರ್ಥನೆ ಮಾಡದೆ, ಗುಡಿಗುಂಡಾರಗಳಿಗೆ ಹೋಗದೆ, ನೀರು, ಮರಗಿಡಗಳನ್ನು ಸುತ್ತದೆ, ತೀರ್ಥಕ್ಷೇತ್ರ ಯಾತ್ರೆ ಮಾಡದೆ ಇರಬೇಕು. ಹೀಗಿದ್ದಾಗ ಅಂದರೆ 'ಇಷ್ಟ ಲಿಂಗದಿ ನಿಜನಿಷ್ಠೆಯಿದ್ದರೆ ಭವ ಬಿಟ್ಟೋಡುವುದು' ಎಂದು ಶರಣರು ನುಡಿದು, ಅದರಂತೆ ನಡೆದು ತೋರಿಸಿದ್ದಾರೆ. ಆ ಮಾರ್ಗದಲ್ಲಿ ನಾವೂ ನಡೆದರೆ ನಮ್ಮ ಬಾಳೂ ಕೂಡ ಹಸನಾಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಇಂಥ ಏಕ ದೇವೋಪಾಸನೆಯ ಬಗ್ಗೆ ವಚಶಾಸ್ತ್ರದಲ್ಲಿ ಮಾತ್ರವಲ್ಲ, ಸಿದ್ಧಾಂತ ಶಿಖಾಮಣಿಯಲ್ಲಿ ಕೂಡ ಸ್ಪಷ್ಟವಾಗಿ ಹೇಳಿದ್ದಾರೆ.

'ದೇವನೊಬ್ಬ ನಾಮಹಲವು' ಎಂದು ಶ್ರೀ ಗುರು ಬಸವಣ್ಣನವರು ಹೇಳಿರುವಂತೆ, ಬಸವಣ್ಣನವರು ಇಷ್ಟಲಿಂಗ ವನ್ನು ಪರಶಿವನನ್ನು ಕುರಿತು 'ಕೂಡಲಸಂಗಾ' ನೀವೆನ್ನ ಕರಸ್ಥಲಕೆ ಬಂದು ಚುಳುಕಾದಿರಯ್ಯ ಎಂದು. ಅದೇ ರೀತಿ, ಚೆನ್ನಬಸವಣ್ಣನವರು 'ಕೂಡಲಚೆನ್ನಸಂಗಾ' ಎಂದರು. ಅಲ್ಲಮಪ್ರಭುದೇವರು 'ಗುಹೇಶ್ವರಾ' ಎಂದರೆ ಅಕ್ಕಮಹಾದೇವಿಯವರು 'ಚೆನ್ನಮಲ್ಲಿಕಾರ್ಜುನಾ' ಎಂದರೆ ಸಿದ್ಧರಾಮೇಶ್ವರರು 'ಕಪಿಲಸಿದ್ಧಮಲ್ಲಿಕಾರ್ಜುನ' ಎಂದರೆ ಮಡಿವಾಳ ಮಾಚಿದೇವರು 'ಕಲಿದೇವರದೇವಾ' ಎಂದರು. ಹೀಗೆ ಒಬ್ಬೊಬ್ಬ ಶರಣರು ದೇವರನ್ನು ಒಂದೊಂದು ಹೆಸರಿನಿಂದ ಕರೆದರು. ಆದರೂ ಅವರೆಲ್ಲರ ಗುರಿ, ಉದ್ದೇಶ ಒಂದೇ ಆಗಿತ್ತು. ಅದೇ ಇಷ್ಟಲಿಂಗಪೂಜೆಯ ಮೂಲಕ ಏಕದೇವೋಪಾಸನೆ. ಇಷ್ಟಲಿಂಗವೆಂಬ ಕುರುಹನ್ನು ಹಿಡಿದು, ಅರಿವನ್ನು ಪಡೆದು ನಿರಾಕಾರ ದೇವರ ಸಾಕ್ಷಾತ್ಕಾರ ಪಡೆಯ ಬೇಕು ಎಂಬುದು ಎಲ್ಲ ಶರಣರು, ನಿರಾಕಾರ ದೇವರನ್ನು ಮನುಷ್ಯ ತನ್ನ ಅಂತರಂಗದಲ್ಲಿ ಕಾಣಬೇಕು, ದೇಹವನ್ನೇ ದೇಗುಲವನ್ನಾಗಿ ಮಾಡಬೇಕೆಂದು ಹೇಳಿದ್ದು ಮಾತ್ರವಲ್ಲದೆ ಶರಣರೆಲ್ಲರೂ ಆ ನಿಟ್ಟಿನಲ್ಲಿ ಸಾಧನೆ ಮಾಡಿ ಶಿವಪಥದಲ್ಲಿ/ಲಿಂಗಪಥದಲ್ಲಿ ನಡೆದು, ಅಂಗಗುಣಗಳವಳಿದು ಲಿಂಗ ಗುಣಗಳನು ಅಳವಡಿಸಿಕೊಂಡು, ಅಂದರೆ ಅರಿಷಡ್ವರ್ಗ, ಅಷ್ಟಮಧ, ಸಪ್ತವ್ಯಸನಗಳನಳಿದು ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣವೆಂದು ನಂಬಿ, ಷಟ್‌ಸ್ಥಲಮಾರ್ಗ ದಲ್ಲಿ ಸಾಗುತ್ತಾ, ಅರಿವು-ಆಚಾರಗಳನ್ನು ಅಳವಡಿಸಿ ಕೊಂಡು, ಸತ್ಯ-ಸದಾಚಾರಿಗಳಾಗಿ ಬಾಳಿ ಬದುಕಿದರಲ್ಲದೆ; ತಾವು ಬಾಳಿ-ಬದುಕಿದ ಬಗ್ಗೆ ಇಡೀ ಜಗತ್ತಿಗೆ ಬೆಳಕನ್ನು ನೀಡುವಂತ ಅಮರ ಸಂದೇಶಗಳನ್ನು ನೀಡಿ ಹೋಗಿದ್ದಾರೆ. ಅಂಥ ಸತ್ಯ ಶರಣರ ಅಮರ ಸಂದೇಶಗಳನ್ನು ನಾವೂ ಸಹ ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ನಮ್ಮ ಬಾಳನ್ನು ಹಸನಾಗಿಸಿಕೊಳ್ಳಲು ಪ್ರಯತ್ನಿಸೋಣ. ಅದರಂತೆ ನಾವು ಇವತ್ತಿನ ಕಾಲದಲ್ಲಿ ಬಾಳುವುದಕ್ಕೆ ಸಾಧ್ಯವಾಗು ತ್ತದೆಯೇ ಎಂದು ಪ್ರಶ್ನಿಸಬಹುದು. ಸತ್ಯ ಶರಣರು ಶಿವಸಾಗರದಲ್ಲಿ ಕೊಡನೀರು ತುಂಬಿಕೊಂಡು ಬಾಳಿ ಬದುಕಿದರೆ ಆನಂದಿಸಿದರೆ, ನಾವು ನಮಗೆ ಸಾಧ್ಯವಾದಷ್ಟು ಅಂದರೆ ಒಂದು ಲೋಟ ನೀರನ್ನಾದರೂ ತುಂಬಿ ಕೊಳ್ಳೋಣ. ಶಿವಶರಣರು ಜೀವನದಲ್ಲಿ ನೂರಕ್ಕೆ ನೂರು ಅಂಕಗಳನ್ನು ಗಳಿಸಿದರೆ, ನಾವು ಎರಡು ಹೊತ್ತು ಇಲ್ಲವೇ ಒಂದು ಹೊತ್ತಾದರೂ ಇಷ್ಟಲಿಂಗ ಪೂಜೆ ಮಾಡೋಣ. ಸಕಲ ಸಂಪತ್ತನ್ನು ನೀಡಿದ ನೀಡುವ ಪರಶಿವನಿಗೆ ಕೃತಜ್ಞತೆ ಸಲ್ಲಿಸೋಣ. ಆ ಮೂಲಕ ಭಕ್ತಿ, ಜ್ಞಾನ ವೈರಾಗ್ಯವನ್ನು ಪಡೆದು ಭವಬಂಧನದಿಂದ ಮುಕ್ತರಾಗಲು ಪ್ರಯತ್ನಿಸೋಣ.

ಪೂಜ್ಯ ಶ್ರೀ ಸಿದ್ಧಗಂಗಾ ಶ್ರೀಗಳು ಬೆಳಗಿನ ಜಾವ ಮೂರು ಗಂಟೆಗೆ ಇಷ್ಟಲಿಂಗ ಪೂಜೆ ಮಾಡಲು ಕುಳಿತರೆ, ನಾವು ಆರು ಗಂಟೆಯಾದರೂ ಪೂಜೆಗೆ ಕುಳಿತುಕೊಳ್ಳಲು ಸಿದ್ಧರಾಗೋಣ. ಶ್ರೀಗಳಿಗಿರುವಷ್ಟು ಕೆಲಸಕಾರ್ಯಗಳ ಒತ್ತಡ ನಮಗೇನು ಇರುವುದಿಲ್ಲ. ಅಲ್ಲವೆ? ಇಷ್ಟಲಿಂಗ ಪೂಜಾನಂದ ಪಡೆಯಲು ಮಾನಸಿಕವಾಗಿ ತಯಾರಾಗ ಬೇಕು ಅಷ್ಟೆ. ಅದಕ್ಕಾಗಿ, ಶರಣರ ನುಡಿಮುತ್ತುಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಬಾಳಿ ಬದುಕಲು ಪ್ರಯತ್ನಿಸಬೇಕು.

ಈ ದಿಸೆಯಲ್ಲಿ ಗುರುಹಿರಿಯರಾದವರು ತಮ್ಮ ತಮ್ಮ ರಕ್ತ-ಭಕ್ತ ಸಂಬಂಧಿಗಳ ಮನೆಗೆ ಹೋದಾಗ ಮನೆ ಮಂದಿಯ ಯೋಗಕ್ಷೇಮವನ್ನು ವಿಚಾರಿಸುವುದರ ಜೊತೆಗೆ ಧರ್ಮ-ಸಂಸ್ಕೃತಿಯ ಬಗ್ಗೆ, ಇಷ್ಟಲಿಂಗಧಾರಣೆ, ಪೂಜೆಯ ಬಗ್ಗೆ, ಶರಣರ ಸಂದೇಶಗಳ ಬಗ್ಗೆ ತಿಳುವಳಿಕೆ ನೀಡುವುದು ಇಂದಿನ ಆಧುನಿಕ ಸಮಾಜದಲ್ಲಿ ಅತ್ಯವಶ್ಯ ವಾಗಿರುತ್ತದೆ. ಇದರಿಂದ ಸಮಾಜದಲ್ಲಿ ಸ್ವಲ್ಪ ಮಟ್ಟಿ ಗಾದರೂ ಧಾರ್ಮಿಕವಾಗಿ ಸುಧಾರಣೆ ಆಗಿ ಎಲ್ಲರೂ ಸುಖ ಶಾಂತಿ, ನೆಮ್ಮದಿಯಿಂದ ಬಾಳಲು ಅನುಕೂಲ ಆಗಬಹುದೆಂದು ಆಶಿಸುತ್ತೇನೆ. *

## ತಿರುಕ್ಕುರಳ್

ಕನ್ನಡ ಅನುವಾದ : ನ. ಮುನಿಸ್ವಾಮಿ

ಅಧ್ಯಾಯ -೨

### ಮಳೆಯ ಮಹಿಮೆ

ಮಳೆಯಿಂದ ಇಳೆಯ ಬಾಳು ಸಾಗುತಿಹುದು ;
ಅದರಿಂದದನು ಅಮೃತವೆಂದೆಣಿಸಲಹುದು

ಮಳೆಯು ಮನುಜರಿಗೆ ಉಣಿಸುಗಳ ಬೆಳೆಸು ತುವುದು ;
ಮತ್ತದು ಅವರಿಗೆ ತಾನೊಂದುಣಿಸಾಗುವುದು

ಮಳೆಯು ಬಾರದಿರೆ ಕಡಲಾವರಿಸಿಹ ಈ ವಿಶಾಲ ವಿಶ್ವದಲಿ
ಅನವರತ ಹಿಂಸಿಪುದು ಹಸಿವು

ನೇಗಿಲನು ಹಿಡಿದು ನೆಲಮನುಳರು ನೇಗಿಲಯೋಗಿಗಳು
ಮಳೆಯೆಂಬ ಆದಾಯವು ಕುಂದಲು

ಮಳೆಯು ತಾ ಹುಯ್ಯದೆ ಮನುಜ ಜೀವನವ ಕೆಡಿಸುವುದು;
ಮತ್ತದು ಹುಯ್ದು ಅವರ ಜೀವನವ ಉದ್ಧರಿಸುವುದು.

ಮುಗಿಲು ಸುರಿಸದಿರೆ ಮಳೆಯು ಮೇದಿನಿಯೊಳು
ಹಸುರು ಹುಲ್ಲಿನ ಚಿಗುರನು ಕಾಣಲರಿದು.

ನಿಡುಗಡಲ ಜಲನಿಧಿಯೂ ಕುಂದುವುದು,
ಮುಗಿಲು ತಾ ಮಳೆ ಸುರಿಸದಿರಲು.

ದೇವತೆಗಳಿಗೆ ಸಂಭ್ರಮದಿ ಪೂಜೆಯೂ ನಡೆಯದೀ ಜಗದೀ,
ಬಾನಿಂದ ಮಳೆ ನೆಲದಿ ಬೀಳದಿರೆ.

ದಾನ, ತಪ-ಇವುಗಳೆರಡೂ ತಪ್ಪುವುದು ಈ ಜಗದಿ,
ಮುಗಿಲು ತಾ ಮಳೆಯನು ಸುರಿಸದಿರಲು.

ಜಲವಿರದೆ ನಡೆಯದು ಜಗದ ಬಾಳು;
ಮಳೆಯಿರದೆ ನೆಲಸದು ಆಚಾರ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

**'ಸಿದ್ಧಗಂಗಾ'** ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಮನಗಂಡು ಆಜೀವ ಸದಸ್ಯರು ಸ್ಪಂದಿಸಿ ಹೆಚ್ಚುವರಿ ಚಂದಾ ೫೦೦ ರೂ. /೪೦೦ ರೂ. ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಏನೆಂದರೆ ಪ್ರಸ್ತುತವಿರುವ ಆಜೀವ ಚಂದಾ ೧೦೦೦/- ರೂ.ಗೆ. ಸರಿಹೊಂದುವಂತೆ ಉಳಿಕೆ ೫೦೦/- ರೂ./ ೪೦೦/- ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ನಿರಂತರವಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

**ತಮ್ಮ ವಿಳಾಸದಲ್ಲಿರುವ LM ನಂಬರ್ ಸೂಚಿಸಿ** ಬಾಕಿ ಆಜೀವ ಚಂದಾವನ್ನು ನಗದು/ ಎಂ.ಒ/ ಚೆಕ್/ ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳಿಸಲು ವಿನಂತಿಸಿಕೊಳ್ಳಲಾಗಿದೆ.

ನಿಮ್ಮ ವಿಳಾಸ ಬದಲಾದಾಗ ನಿಮಗೆ ಕೊಟ್ಟಿರುವ ಆಜೀವ ಸದಸ್ಯತ್ವದ ನಂಬರನ್ನು ತಪ್ಪದೆ ತಿಳಿಸಿರಿ. ಇದರಿಂದ ನೇರವಾಗಿ ಪತ್ರಿಕೆ ನಿಮಗೆ ತಲುಪಲು ಸಾಧ್ಯವಾಗುತ್ತದೆ. ಆಗಾಗ್ಗೆ ಬದಲಾಗುವ ನಿಮ್ಮ ಹೊಸ ವಿಳಾಸವನ್ನು ಪತ್ರಿಕಾ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.







## "ರಾಗಿ"

-ರಾಜಶೇಖರಯ್ಯ,
ನಿವೃತ್ತ ಪ್ರಾಂಶುಪಾಲರು,
೩೬ನೇ ಕ್ರಾಸ್, ನಂ.೧೧೨೮,
ಎಸ್.ಐ.ಟಿ. ಮುಖ್ಯರಸ್ತೆ, ತುಮಕೂರು-೨.

"ಹಿಟ್ಟಂ ತಿಂದಂ ಬೆಟ್ಟಂ ಕಿತ್ತಂ" 'ರಾಗಿ ತಿಂದವನು ನಿರೋಗಿ' ಎಂಬ ನಾಣ್ನುಡಿ ಪ್ರಚಲಿತದಲ್ಲಿದೆ. ರಾಗಿ ನಿರೋಗದ ಆಹಾರ. ವರ್ಷಪೂರ್ತಿ ತಿಂದರೂ ಬೇಸರವಾಗದ ಆಹಾರ. ಹಿಂದೆ ರಾಗಿಯ ಆಹಾರವನ್ನು ಬಡವರ ಆಹಾರವೆನ್ನುತಿದ್ದರು. ಇಂದು ಸಮಾಜದ ಎಲ್ಲಾ ವರ್ಗದವರು ಬಡವ, ಬಲ್ಲಿದ, ಮೇಲು, ಕೀಳು ಎನ್ನದೆ ಉಪಯೋಗಿಸುತ್ತಿದ್ದಾರೆ. ಪ್ರಸ್ತುತ ಪಟ್ಟಣ, ನಗರ ಹಾಗೂ ಗಲ್ಲಿಗಲ್ಲಿಗಳಲ್ಲಿ ರಾಗಿಯ ಆಹಾರ ರಾರಾಜಿಸುತ್ತಿದೆ. 'ಇಲ್ಲಿ ರಾಗಿ ಮುದ್ದೆ ದೊರೆಯುತ್ತದೆ' ಎಂಬ ಬಣ್ಣ ಬಣ್ಣದ ಫಲಕಗಳು ತೂಗಾಡುತ್ತಿವೆ. ಹೋಟಲ್ ಊಟ ಮಾಡುವವರಿಗೆ ಇಂದು ಮುದ್ದೆ ಊಟವಿಲ್ಲವೆಂದರೆ ನಿರಾಶರಾಗುತ್ತಾರೆ. ಕಪ್ಪಾಗಿದ್ದ ಈ ರಾಗಿ ಮುದ್ದೆಯನ್ನು ಹಿಂದೆ ತೆಗಳಿದವರು ಇಂದು ಹೊಗಳುತ್ತಿದ್ದಾರೆ. 'ಗಟ್ಟಿಸಾರು ಮುದ್ದೆ ಊಟ ಅಮೃತಕ್ಕೆ ಸಮಾನ' ಎನ್ನುವವರು ದಿನೇ ದಿನೇ ಹೆಚ್ಚಾಗುತ್ತಿದ್ದಾರೆ. ಕಾರಣ ರಾಗಿಯ ಸವತಿ 'ಸಕ್ಕರೆ' ಮಾನವನನ್ನು ದುರ್ಬಲಗೊಳಿಸುತ್ತಿದೆ.

ರಾಗಿಯನ್ನು ಕರ್ನಾಟಕ, ಆಂಧ್ರ, ತಮಿಳುನಾಡು, ಬಿಹಾರದಲ್ಲಿ ಬೆಳೆದರೂ ನಮ್ಮ ರಾಜ್ಯದಲ್ಲಿ ಅತಿ ಹೆಚ್ಚು ಬೆಳೆಯುತ್ತಾರೆ. ಡಿಸಂಬರ್ ಮತ್ತು ಜನವರಿಯಲ್ಲಿ ಕೊಯ್ಲಿಗೆ ಬರುವ ಈ ಬೆಳೆ – ಕಣದಲ್ಲಿ ಸ್ವಚ್ಛವಾಗಿ, ಕಣಜದಲ್ಲಿ ಸೇರಿ, ಮನುಜರಿಗೆ ತೃಪ್ತಿ ನೀಡುತ್ತಿದೆ. ರಾಗಿಯಿಂದ-ಅಂಬಲಿ, ಸರಿ, ರೊಟ್ಟಿ, ದೋಸೆ, ಇಡ್ಲಿ, ಉಪ್ಪಿಟ್ಟು, ಮುದ್ದೆ ಅಷ್ಟೇ ಏಕೆ ಇತ್ತೀಚೆಗೆ ರಾಗಿ ಮಾಲ್ಟ್ ಮತ್ತು ಬಿಸ್ಕತ್‌ಗಳು ಮಾರುಕಟ್ಟೆಯಲ್ಲಿ ತಯಾರಾಗಿ ಮಾರಾಟವಾಗುತ್ತಿವೆ. ದೇಹ ಶ್ರಮ ಜೀವಿಗಳಿಗೆ ಹೇಳಿ ಮಾಡಿಸಿದ ಆಹಾರ. ಆಹಾರದ ಜೀರ್ಣಾವಧಿ ಮೂರು ಗಂಟೆ. ಉತ್ಪತ್ತಿಯಾಗುವ ಕ್ಯಾಲರಿ ೩೪೫. ಕಬ್ಬಿಣ ಮತ್ತು ಕ್ಯಾಲ್ಷಿಯಂ ಹೆಚ್ಚಿರುವ ಈ ಆಹಾರ ಸಕ್ಕರೆ ರೋಗಿಗಳಿಗೆ ಹೆಚ್ಚು ಉಪಯುಕ್ತ. ಹದವಾದ ರಾಗಿ ತೆನೆಕಾಳನ್ನು ನೆನಸಿ, ರುಬ್ಬಿ, ದೋಸೆ ಮಾಡಿ ತಿನ್ನಲು ಬಹು ರುಚಿ. ತೆನೆಯ ಸುಟ್ಟು ಹೊಸೆದ ಕಾಳಿಗೆ ಬೆಲ್ಲ ಮತ್ತು ಕೊಬ್ಬರಿ ಅಥವಾ ಉಪ್ಪು ಹಸಿಮೆಣಸಿನಕಾಯಿ ಮತ್ತು ಬೆಳ್ಳುಳ್ಳಿ ಹಾಕಿದ ಮಿಶ್ರಣ ತಿನ್ನಲು ಬಲು ಖುಶಿ. ರಾಗಿಯನ್ನು ಯಾವ ರೀತಿ ಉಪಯೋಗಿಸಿದರೂ ಆರೋಗ್ಯಕ್ಕೆ ಹಾನಿಕಾರಕವಲ್ಲ.

ಪ್ರತಿದಿನ ಬೆಳಿಗ್ಗೆ ರಾಗಿ ಅಂಬಲಿ ಸೇವನೆ ದೇಹವನ್ನು ಹದವಾಗಿ ತಂಪುಗೊಳಿಸಿ ದೃಢವಾಗಿಸುತ್ತದೆ. ರಾಗಿ ಸರಿ ಚಿಕ್ಕ ಮಕ್ಕಳ ಬೆಳವಣಿಗೆಗೆ ಸ್ಪೂರ್ತಿ ನೀಡುತ್ತದೆ. ಋತುಚಕ್ರ ವ್ಯತ್ಯಾಸದ ತರುಣಿಯರಿಗೆ ರಾಗಿ ಆಹಾರ ವರಪ್ರಸಾದವಾಗಿದೆ. ರಾಗಿ ಹುರಿದು ಪುಡಿ ಮಾಡಿದ 'ಹುರಿಹಿಟ್ಟು' ಬೆಲ್ಲ ಅಥವಾ ಉಪ್ಪು ಹುಣಸೆ ನೀರಿನಿಂದ ಕಟ್ಟಿದ ಉಂಡೆ ಶರೀರಕ್ಕೆ ತಂಪು ಮತ್ತು ಶಕ್ತಿ ವರ್ಧಕವಾಗಿ ಕೆಲಸ ಮಾಡುತ್ತದೆ. ಈ ಉಂಡೆ ತಿಂದವನು ಬಂಡೆಯಂತೆ ಗಡುಸಾಗಿರುತ್ತಾನೆಂದು ಹೇಳುತ್ತಾರೆ.

ರಾಗಿಯಲ್ಲಿ ಕ್ಯಾಲ್ಷಿಯಂ, ಕಬ್ಬಿಣ, ರಂಜಕ ಮತ್ತು ಜೀವಸತ್ವಗಳಾದ ಬಿ೧, ಬಿ೨, ಸೋಡಿಯಂ, ಪೊಟಾಷಿಯಂ ಮತ್ತು ಇತರೆ ಆವಶ್ಯಕ ವಸ್ತುಗಳಿರುವುದನ್ನು ಮೈಸೂರಿನ ಸಿ.ಎಫ್.ಟಿ.ಆರ್.ಐ. (C.F.T.R.I) ಸಂಸ್ಥೆ ಪ್ರಮಾಣೀಕರಿಸಿ, ರಾಗಿಯ ಆಹಾರ ಮನುಷ್ಯನಿಗೆ ಯಾವ ವಿಧದಿಂದಲೂ ಅಪಾಯಕಾರಿ ಅಲ್ಲವೆಂಬುದನ್ನು ಖಚಿತಪಡಿಸಿದೆ. ಈ ಸಂಸ್ಥೆ ತಾನೇ ರಾಗಿ ಮಾಲ್ಟ್ ಮತ್ತು ಬಿಸ್ಕತ್‌ಗಳನ್ನು ವೈಜ್ಞಾನಿಕ ರೀತಿಯಲ್ಲಿ ಹೇಗೆ ತಯಾರಿಸುವುದನ್ನು ತಿಳಿಸಿದೆ.

ತೆನೆಯ ಹಸಿ ರಾಗಿಯನ್ನು ಉರಿದು ತಿನ್ನುವುದರಿಂದ ರಕ್ತದೊತ್ತಡ, ಸಕ್ಕರೆ ಖಾಯಿಲೆ, ಲಿವರ್ ಕಾಯಿಲೆ, ಮತ್ತು ಹೃದಯದ ದುರ್ಬಲತೆಯನ್ನು ಶಮನಗೊಳಿಸಬಹುದು. ಹಸಿ ರಾಗಿ ಗರಿಯ ಒಂದೆರಡು ತೊಟ್ಟು ರಸವನ್ನು ಕಣ್ಣಿಗೆ ಹಾಕುವುದರಿಂದ ಕಣ್ಣು ಉರಿ ತಡೆಯಬಹುದು. ಹಸಿ ರಾಗಿ ಕಡ್ಡಿಯ ರಸವನ್ನು ಜೇನು ತುಪ್ಪದೊಂದಿಗೆ ಬೆರಸಿ ಎಳೆಯ ಮಕ್ಕಳು ಹಾಗೂ ನಿಶ್ಶಕ್ತ ರೋಗಿಗಳಿಗೆ ನೀಡಿದರೆ, ಶಕ್ತಿ ವರ್ಧಕವಾಗಿ ಕೆಲಸ ಮಾಡುತ್ತದೆ. ಇದೇ ರಸವನ್ನು ಚರ್ಮಕ್ಕೆ ಸವರುವುದರಿಂದ ಚರ್ಮ ರೋಗ

ಗಳಾದ ಕಜ್ಜಿ, ತುರಿ, ನವೆ ಇತ್ಯಾದಿಗಳನ್ನು ತಡೆಗಟ್ಟಬಹುದು. ರಾಗಿ ಉಬ್ಬಲು ತುಂಬಿದ ತಲೆ ದಿಂಬು-ಸುಖ ನಿದ್ರೆ ನೀಡುವುದಲ್ಲದೆ ಕೂದಲು ಉದುರುವುದನ್ನು ತಡೆಗಟ್ಟುತ್ತದೆ. ಹಸಿಯಾದ ರಾಗಿ ತೆನೆಯನ್ನು ಹಲ್ಲುಗಳಿಂದ ಜೇರಿ ಅಗಿದು ತಿನ್ನುವುದದಿಂದ ವಸಡುಗಳು ಭದ್ರವಾಗಿ, ಜೀರ್ಣಕ್ರಿಯೆ ಹೆಚ್ಚು, ಮಲಬದ್ಧತೆಯಿಲ್ಲದಂತಾಗುತ್ತದೆ. ಬೇಸಿಗೆಯಲ್ಲಿ ರಾಗಿ ಮುದ್ದೆಯನ್ನು ಮಜ್ಜಿಗೆಯಲ್ಲಿ ಮಿಶ್ರಮಾಡಿ ಸೇವಿಸಿದರೆ -ಹಸಿವು ಬಾಯಾರಿಕೆಯಿಲ್ಲದೆ ಲವಲವಿಕೆಯಿಂದಿರ ಬಹುದು.

ರಾಗಿ, ಹುಲ್ಲು ದನಗಳಿಗೆ ಸಮೃದ್ಧ ಆಹಾರ. ದೀಪಾವಳಿಯಲ್ಲಿ ರಾಗಿ ಗರಿಮೇದ ದನಗಳು ದಿನಕ್ಕೊಂದು ಚಂದವಾಗುತ್ತವೆ. ಆದ್ದರಿಂದಲೇ ದೀವಳಿಗೆಯಲ್ಲಿ ದನದ ಹಿಂದಿರು ಎಂದು ಹೇಳುತ್ತಾರೆ. ಈಗಂತೂ ರಾಗಿಯ ಬಹು ಇಳುವರಿ ತಳಿಗಳು ಬಳಕೆಗೆ ಬಂದಿದ್ದು ವರ್ಷದ ಎಲ್ಲಾ ಕಾಲದಲ್ಲೂ ರಾಗಿ ಬೆಳೆಯುವಂತಾಗಿದೆ.

ಚಿಕ್ಕಂದಿನಿಂದಲೇ ಆಹಾರದ ಬಣ್ಣ, ರುಚಿ, ವಾಸನೆಗಳಿಗೆ ಆದ್ಯತೆ ನೀಡದೆ ಶಕ್ತಿವರ್ಧಕ, ರೋಗ ನಿರೋಧ್ಧಕ ಮತ್ತು ಎಲ್ಲಾ ವಯಸ್ಸಿನವರೂ ಈ ರಾಗಿಯನ್ನು ಮೇಲೆ ತಿಳಿಸಿದ ಯಾವ ರೂಪದಲ್ಲಾದರೂ ಉಪಯೋಗಿ ಸಿದರೆ ಮುಂಬರುವ ಖಾಯಿಲೆಗಳನ್ನು ಬಹಳ ಮಟ್ಟಿಗೆ ತಡೆದು ಆರೋಗ್ಯವಂತರಾಗಿರಬಹುದು.

*

## ವಚನಗಳು

ಲಿಂಗನಯನದಲ್ಲಿ ನೋಡುತ್ತ, ಲಿಂಗ ಜಿಹ್ವೆಯಲ್ಲಿ
ನುಡಿಯುತ್ತ, ಲಿಂಗಹಸ್ತದಲ್ಲಿ ಮುಟ್ಟುತ್ತ,
ಲಿಂಗನಾಸಿಕದಲ್ಲಿ ವಾಸಿಸುತ್ತ, ಲಿಂಗಸ್ತೋತ್ರವ
ಕೇಳುತ್ತ, ಲಿಂಗಪಾದಲ್ಲಿ ನಡೆವುತ್ತ ಸರ್ವಾಂಗ
ಲಿಂಗಮಯ ಫಾದ ಶರಣರ
ಸಂಗಸುಖದೊಳಗೆನ್ನನಿರಿಸಯ್ಯ
ಬಸವಪ್ರಿಯ ಕೂಡಲ ಚೆನ್ನಬಸವಣ್ಣ !

-ಹಡಪದ ಅಪ್ಪಣ್ಣ

## ಜುಲೈ ತಿಂಗಳಲ್ಲಿ ಬರುವ ಮಹತ್ವದ ದಿನಗಳು

**ಜುಲೈ ೧ - ವೈದ್ಯರ ದಿನಾಚರಣೆ :**

ವೈದ್ಯರ ಪ್ರಾಮಾಣಿಕತೆ, ಸೇವಾ ಮನೋಭಾವ ನೆನೆಯುವ ದಿನ. ಬಡವ-ಶ್ರೀಮಂತ ಎನ್ನದೇ ಎಲ್ಲರಿಗೂ ಸಮಾನ ಚಿಕಿತ್ಸೆ, ಪ್ರೀತಿ, ವಿಶ್ವಾಸ ನೀಡಬೇಕಾಗಿರುವುದು ಅವರ ಕರ್ತವ್ಯ. ಇದರಿಂದಲೇ ಹಲವಾರು ರೋಗಿಗಳು ಗುಣಮುಖರಾಗುವುದು ವಿಶೇಷ. ಇಂಥ ಸೇವಾ ಮನೋ ಭಾವ ಹೊಂದಿರುವ ವೈದ್ಯರಿಗಾಗಿ ಈ ದಿನ.

ವೈದ್ಯಕೀಯ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿರುವ ಡಾ॥ ಬಿ.ಸಿ. ರಾಯ್, ಗಾಂಧೀಜಿಯ ವೈಯಕ್ತಿಕ ವೈದ್ಯ ರಾಗಿದ್ದರಲ್ಲದೇ ನಂತರ ಪಶ್ಚಿಮ ಬಂಗಾಲದ ಮುಖ್ಯಮಂತ್ರಿ ಆಗಿದ್ದರು. ಭಾರತರತ್ನ ಪ್ರಶಸ್ತಿ ವಿಜೇತರೂ ಆಗಿದ್ದಾರೆ. ಇವರ ನೆನಪಿಗಾಗಿ ವೈದ್ಯರ ದಿನ ಆಚರಿಸಲಾಗುತ್ತದೆ. ಆಫ್ರಿಕಾದ ಲ್ಯಾಂಬರೀನಲ್ಲಿ ೫೨ ವರ್ಷಕಾಲ ನೀಗ್ರೋ ಜನರಿಗೆ ವೈದ್ಯಕೀಯ ಸೇವೆ ಸಲ್ಲಿಸಿದ ಆಲ್ಬರ್ಟ್ ಶ್ಲೇಮೀಟ್ಸರ್, ನೊಬೆಲ್ ಶಾಂತಿ ಪ್ರಶಸ್ತಿಯನ್ನು ಹೊಂದಿದ್ದರು. ಅವರನ್ನು ಮತ್ತು ಇದೇ ರೀತಿ ಸೇವೆ ಸಲ್ಲಿಸಿದ ಎಲ್ಲ ವೈದ್ಯರನ್ನು ನೆನಪಿಸುವ ದಿನ.

**ಜುಲೈ ೧೧ - ವಿಶ್ವ ಜನಸಂಖ್ಯಾ ದಿನಾಚರಣೆ :**

ವಿಶ್ವ ಜನಸಂಖ್ಯೆಯಲ್ಲಿ ಚೈನಾ ಮೊದಲ ಸ್ಥಾನ. ಭಾರತ ದ್ವಿತೀಯ ಸ್ಥಾನ, ಅಮೇರಿಕಾ ತೃತೀಯ ಸ್ಥಾನ ಹೊಂದಿವೆ. ಅಮೇರಿಕದಲ್ಲಿನ ಭಾರತೀಯರ ಜನಸಂಖ್ಯೆ ೧.೬ ದಶಲಕ್ಷ ದಾಟಿದೆ. ಭಾರತದ ಮೊದಲ ಜನಗಣತಿ ಪ್ರಾರಂಭವಾಗಿ ಮುಕ್ತಾಯವಾದದ್ದು ೧೮೭೨ರಲ್ಲಿ. ೨೦೦೧ನೇ ಜನಗಣತಿ ೧೪ನೇ ಜನಗಣತಿ ಆಗಿದೆ. ವಿಶ್ವ ಜನಸಂಖ್ಯೆ ೬ ಬಿಲಿಯನ್ ತಲುಪಿದೆ. ಭಾರತದ ಜನಸಂಖ್ಯೆ ಸ್ವಾತಂತ್ರಪೂರ್ವದಲ್ಲಿ ೩೫ ಕೋಟಿ. ೨೦೪೦ರ ಸಮಯಕ್ಕೆ ೧೫೦ ಕೋಟಿ ದಾಟಲಿದೆ. ೨೦೦೧ರ ಜನಗಣತಿ ಪ್ರಕಾರ ೫೩೧೨೭೭೭೮ ಪುರುಷರು, ೪೯೫೭೩೮೧೯೪ ಸ್ತ್ರೀಯರು ಇದ್ದು ಸಾಕ್ಷರತಾ ಮಟ್ಟ ಶೇ. ೬೫.೮೮ ಇದ್ದಿತು. ಹಾಗೆ ಕರ್ನಾಟಕದಲ್ಲಿ ೨೬೮೫೬೩೪೩ ಪುರುಷರು, ೨೫೮೭೭೬೧೫ ಸ್ತ್ರೀಯರು ಇದ್ದು, ಬೆಂಗಳೂರು ಅತಿ ಹೆಚ್ಚು ಜನಸಂಖ್ಯೆ ಹೊಂದಿದ್ದು ಕೊಡಗು ಅತಿ ಕಡಿಮೆ ಜನಸಂಖ್ಯೆ ಹೊಂದಿತ್ತು. ಜನಸಂಖ್ಯೆ ಹೆಚ್ಚಳದಿಂದ ನಿರುದ್ಯೋಗ, ಆಹಾರದ ಅಭಾವ ಇತ್ಯಾದಿ ಸಮಸ್ಯೆಗಳು ಉಂಟಾಗುವುವು. ಭೂಮಿ ಸ್ಥಿರ ಸಂಪತ್ತು ಆದರೂ ಜನಸಂಖ್ಯೆಯೊಂದಿಗೆ ಬೆಳೆಯುವುದಿಲ್ಲ. ಅದಕ್ಕೆ ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟಬೇಕು.

-**ಶಕುಂತಲ ಯು.** ಹೊನ್ನಾಳಿ-೫೭೭ ೨೧೭







## ಶಿಕ್ಷಣ-ವಿದ್ಯೆ-ಜ್ಞಾನ

-ಜಿ.ಎ. ರೇಣುಕಾ,
೧೩೨, ನೀಲಾದ್ರಿ ಮಹಲ್, 'ಜ' ಬ್ಲಾಕ್,
೪೫/೯. ನಂದಿದುರ್ಗ ರಸ್ತೆ, ಬೆಂಗಳೂರು-೫೬೦ ೦೪೬

ಶಿಕ್ಷಣವನ್ನು ಪಡೆಯಬೇಕು. ವಿದ್ಯೆಯನ್ನು ಕಲಿಯಬೇಕು, ಜ್ಞಾನವನ್ನು ಗಳಿಸಬೇಕು. ಶಿಕ್ಷಣ ಹಾಗೂ ವಿದ್ಯೆಗಳನ್ನು ಗುರುವಿನ ಮೂಲಕ ಗಳಿಸಿಕೊಳ್ಳಬಹುದು. ಆದರೆ ಈ ಶಿಕ್ಷಣ ಮತ್ತು ವಿದ್ಯೆಗಳ ಫಲವಾದ ಜ್ಞಾನವನ್ನು ವ್ಯಕ್ತಿ ಸ್ವತಃ ಗಳಿಸಬೇಕು. ಕಾರಣ ವಿದ್ಯೆ ಕಲಿತವರೆಲ್ಲ ಜ್ಞಾನಿ ಅಂದರೆ ಬುದ್ಧಿವಂತರಾಗಿರಲು ಸಾಧ್ಯವಿಲ್ಲ. ಇದಕ್ಕೆ ಉದಾಹರಣೆ ಯಾಗಿ ನೀತಿಕತೆಯೊಂದಿದೆ. ಗುರುಕುಲದಲ್ಲಿ ವಿದ್ಯೆ ಕಲಿತು ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಿದ್ದ ಮೂವರು ಪಂಡಿತರು ದಾರಿಯಲ್ಲಿ ಒಂದು ಹುಲಿಯ ಅಸ್ಥಿಪಂಜರವನ್ನು ಕಾಣುತ್ತಾರೆ. ಅವರಲ್ಲಿ ಒಬ್ಬನಿಗೆ ತನ್ನ ವಿದ್ಯೆಯನ್ನು ಮೆರೆಯುವ ಆಸೆಯಾಗಿ ಆ ಅಸ್ಥಿಪಂಜರಕ್ಕೆ ರಕ್ತಮಾಂಸ ಗಳನ್ನು ತನ್ನ ವಿದ್ಯೆಯ ಬಲದಿಂದ ತುಂಬುತ್ತಾನೆ. ಇದನ್ನು ಕಂಡ ಇನ್ನೊಬ್ಬ ಪಂಡಿತ ತಾನೇನೂ ಕಮ್ಮಿಇಲ್ಲವೆಂದು ತೋರಿಸಲು ಆ ಹುಲಿಯ ಕಳೇಬರಕ್ಕೆ ಪ್ರಾಣ ತುಂಬಲು ಉದ್ಯುಕ್ತನಾಗುತ್ತಾನೆ. ಆಗ ಮೂರನೆಯವ ಬೇಡವೆನ್ನುತ್ತಾನೆ. ಆದರೆ ಎರಡನೆಯವನು ಕೂಡಲೆ ಒಂದು ಮರವನ್ನೇರಿ ಕೂರುತ್ತಾನೆ. ನೋಡುನೋಡುತ್ತಿದ್ದಂತೆಯೇ ಜೀವ ತಾಳಿದ ಹುಲಿಯು ಆ ಇಬ್ಬರು ಪಂಡಿತರನ್ನೂ ಕೊಂದು ತಿನ್ನುತ್ತದೆ. ಹೀಗೆ ಕೇವಲ ವಿದ್ಯೆ ಉಪಯೋಗಿಸಿದ ಆ ಇಬ್ಬರು ನಾಶ ವಾಗುತ್ತಾರೆ. ಬುದ್ಧಿ ಉಪಯೋಗಿಸಿದ ಪಂಡಿತ ಬದುಕುಳಿ ಯುತ್ತಾನೆ!. ಶಿಕ್ಷಣ-ವಿದ್ಯೆಗಳ ಜೊತೆಗೆ ಸಮಯ ಸ್ಫೂರ್ತಿ-ಸುಜ್ಞಾನಗಳಿರುವುದು ಅತ್ಯಗತ್ಯ.

ಶಿಕ್ಷಣದಲ್ಲಿ ರೀತಿ-ನೀತಿ, ಶಿಸ್ತು ನಿಯಮಗಳಿರುತ್ತವೆ. ವಿದ್ಯೆಯನ್ನು ಹೇಗೆ ಕಲಿಯಬೇಕು? ಯಾವ ರೀತಿಯಾದ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು? ಅವುಗಳ ಕ್ರಿಯಾತ್ಮಕ ರೂಪಗಳೇನು? ಎಂಬುದರ ವಿವರಗಳು ಶಿಕ್ಷಣದಲ್ಲಿ ದೊರೆಯುತ್ತವೆ. ಇಲ್ಲಿ ಸಮಯ ಪರಿಪಾಲನೆ ಹಾಗೂ ಕಟ್ಟುಪಾಡುಗಳಿಗೆ ಒಳಪಟ್ಟು ನಡೆಯುವುದು ಬಹಳ ಮುಖ್ಯ. ಅಶಿಸ್ತು, ಅವ್ಯವಸ್ಥಿತವಾದ ಶಿಕ್ಷಣದಿಂದ ಅಸಭ್ಯತೆ, ಉಚ್ಛೃಂಖಲತೆಗಳು ಉಂಟಾಗುತ್ತದೆಯೇ ವಿನಃ ಸತ್ಪರಿಣಾಮ ಉಂಟಾಗುವುದಿಲ್ಲ. ಶಿಸ್ತಿನಿಂದ ಕೂಡಿದ ಕ್ರಮಬದ್ಧವಾದ ಮತ್ತು ಮುಖ್ಯವಾಗಿ ನಿಜವಾದ ಈಪ್ಸೆಯಿಂದ ಕೂಡಿದ ಶಿಕ್ಷಣದಿಂದ ಕಲಿತ, ವಿದ್ಯೆ ಹಾಗೂ ಗಳಿಸಿದ ಜ್ಞಾನಗಳು ಯಾವುದೇ ಸಂದೇಹಕ್ಕೆ ಎಡೆಗೊಡದೆ ನಿಚ್ಚಳವಾಗಿದ್ದು, ಕಲಿತವರಲ್ಲಿ ವಿಶೇಷ ಪರಿಣಿತಿ, ಆಳವಾದ ಅನುಭವಗಳನ್ನು ಉಂಟು ಮಾಡುತ್ತವೆ. ಪರಿಣಾಮವಾಗಿ ವಿಷಯ ಮರೆಯಲಾಗದಂತೆ ಮನಸ್ಸಿನಲ್ಲಿ ಮತ್ತು ಮೆದುಳಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಈ ಜ್ಞಾನ ಸದ್ವಿನಿಯೋಗ ಆಗಬೇಕಷ್ಟೆ.

ವಿದ್ಯೆ ಎಂದರೆ, ಯಾವುದೇ ವಸ್ತು, ವಿಷಯ ಅಥವಾ ಕೆಲಸದ ಬಗ್ಗೆ ತಿಳುವಳಿಕೆ ಪಡೆಯುವುದು ಅಂದರೆ ಕಲಿತು ಕೊಳ್ಳುವುದು, ಎಂದರ್ಥ. ಇಂದು ರೇಡಿಯೋ ಸ್ವಿಚ್ ಒತ್ತಿದರೆ ಸಂಗೀತ-ಸಮಾಚಾರ ಇತ್ಯಾದಿ ಕೇಳಿಬರುತ್ತದೆ ಎಂಬುದು ಸಾಮಾನ್ಯ ತಿಳುವಳಿಕೆ. ಈ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ಒಂದು ನಿಲಯ ಇರುತ್ತದೆ. ಅಲ್ಲಿ ಕಲಾವಿದರು, ಮಾತನಾಡುವವರಿರುತ್ತಾರೆ. ಕಾರ್ಯಕ್ರಮ ಗಳನ್ನು ಧ್ವನಿಮುದ್ರಣ ಮಾಡಿ ಪ್ರಸಾರ ಮಾಡಲಾಗುತ್ತದೆ ಎಂಬ ತಿಳುವಳಿಕೆ ಜ್ಞಾನ ಎನಿಸಿಕೊಳ್ಳುತ್ತದೆ. ರೇಡಿಯೋ ನಿರ್ಮಾಣ ತಂತ್ರ, ಪ್ರಸಾರ, ಧ್ವನಿ ಮುದ್ರಣ ಇತ್ಯಾದಿಗಳ ಬಗೆಗಿನ ಜ್ಞಾನ ವಿಶೇಷ ಅಂದರೆ ವಿಜ್ಞಾನ ಎನಿಸಿಕೊಳ್ಳುತ್ತದೆ. ಹೀಗೆ ಸಾಮಾನ್ಯ ತಿಳುವಳಿಕೆ, ಜ್ಞಾನ, ವಿಜ್ಞಾನ ಇವುಗಳನ್ನು ತಿಳಿಸುವುದೇ ವಿದ್ಯೆ.

ಬಲವಾದ ಇಚ್ಛೆ, ಅದಕ್ಕೆ ತಕ್ಕ ಶ್ರದ್ಧೆ ಹಾಗೂ ಪರಿಶ್ರಮ ಗಳಿಂದ ಕಲಿಯದ ಹೊರತು ಯಾವ ವಿದ್ಯೆಯೂ ಕರಗತ ವಾಗುವುದಿಲ್ಲ. ನಮ್ಮ ಭಾರತೀಯ ಪರಂಪರೆಯಲ್ಲಿ ಅರವತ್ನಾಲ್ಕು ವಿದ್ಯೆಗಳ ಉಲ್ಲೇಖವಿದೆ. ಇವುಗಳನ್ನು ಬಲ್ಲವನೇ ಇತರರಿಗಿಂತ ಭಿನ್ನವಾಗಿ ನಾಯಕ ಪಟ್ಟ ಗಳಿಸುತ್ತಾನೆ! ಯಾವುದೇ ವಿದ್ಯೆಯನ್ನು ಕಲಿಯಬೇಕಾದರೆ ಆ ವಿದ್ಯೆಯನ್ನು ಚೆನ್ನಾಗಿ ಬಲ್ಲಂತಹ ಗುರುವಿನ ಮೊರೆ ಹೋಗಬೇಕಾಗುತ್ತದೆ. ತಕ್ಕ ಶಿಕ್ಷಣವನ್ನು ನೀಡಿ ಮಾರ್ಗ ದರ್ಶನ ಮಾಡುವವನು ಅವನೇ. ಕೆಲವೊಮ್ಮೆ ಈ ಗುರು ಪುಸ್ತಕವಾಗಿರಬಹುದು. ಒಟ್ಟಿನಲ್ಲಿ ನಮಗೆ ಏನನ್ನಾದರೂ ಕಲಿಸುವವರು ತನಗೆ ತಾನೆ ಗುರುವಿನ ಸ್ಥಾನವನ್ನು ಪಡೆದು ಕೊಳ್ಳುತ್ತಾರೆ! ಸದ್ಗುರು ದೊರೆತಾಗ ಸುಜ್ಞಾನವು ಸನ್ಮಾರ್ಗವೂ ತಾನಾಗಿಯೇ ಲಭ್ಯವಾಗುತ್ತದೆ. ಸದ್ಗುರು ಸಿಗುವುದು ಹೇಗೆ

ಅದೃಷ್ಟವೋ ಅದೇ ರೀತಿ ಉತ್ತಮ ಶಿಷ್ಯ ಲಭಿಸುವುದು ಅಷ್ಟೇ ಮುಖ್ಯ. ವಿದ್ಯೆ ಕಲಿಸುವ ಗುರು, ಮನುಷ್ಯನೆಂಬ ಮಣ್ಣಿನ ಮುದ್ದೆಯನ್ನು ತಿದ್ದಿ, ತೀಡಿ ಮಾನವನೆಂಬ ಸುಂದರ ಮೂರ್ತಿಯನ್ನಾಗಿಸುವ ಶಿಲ್ಪಿಯಂತೆ, ಅಂಥ ಗುರುವಿನಲ್ಲಿ ಗೌರವ, ಶ್ರದ್ಧೆ, ನಂಬಿಕೆಗಳನ್ನು ಇಟ್ಟುಕೊಂಡು ಆತನ ಮಾರ್ಗ ದರ್ಶನದಲ್ಲಿ ಸ್ವನಿಷ್ಠೆಯಿಂದ ಕಲಿತಾಗ ಮಾತ್ರ ವಿದ್ಯೆ ಕರಗತ ವಾಗುತ್ತದೆ.

ಗಮನಿಸಬೇಕಾದ ಮುಖ್ಯ ಸಂಗತಿ ಒಂದಿದೆ. ಎಲ್ಲರಿಗೂ ಎಲ್ಲಾ ವಿದ್ಯೆಗಳೂ ಹತ್ತುವುದಿಲ್ಲ. ಆಯಾ ವ್ಯಕ್ತಿಗಳ ಬುದ್ಧಿಮತ್ತೆ, ನಿಷ್ಠೆ, ಪರಿಶ್ರಮಗಳಿಗೆ ಅನುಸಾರವಾಗಿ ಅವರವರ ಸಾಧನೆ ಮತ್ತು ಸಿದ್ಧಿಗಳಿರುತ್ತವೆ. ಇಲ್ಲಿ ಅವರವರ ಬುದ್ಧಿಯ ಮಟ್ಟ ಮುಖ್ಯ ಪಾತ್ರ ವಹಿಸುತ್ತದೆಯಾದ ಕಾರಣ 'ಕೈಲಾಗದವರು ಮೈ ಪರಚಿಕೊಂಡಂತೆ' ಆಗದೆ ತಮ್ಮ ತಮ್ಮ ಬುದ್ಧಿಮಟ್ಟ ಹಾಗೂ ಸಾಮರ್ಥ್ಯಕ್ಕೆ ತಕ್ಕಂಥ ಕ್ಷೇತ್ರಗಳಲ್ಲಿ ಸಾಧನೆ ಮಾಡಿದರೆ ಯಶಸ್ಸು ಖಂಡಿತ. ಹಠತೊಟ್ಟು ಸಾಧನೆ ಮಾಡಿದರೆ ಯಾವುದೂ ಅಸಾಧ್ಯವಲ್ಲ ಎನ್ನುತ್ತಾರೆ ನಿಜ. ಆದರೆ ಆ ಸಾಧನೆ ವ್ಯಕ್ತಿ ವಿಶೇಷ ಗುಣಗಳ ಮೇಲೆ ನಿರ್ಧಾರವಾಗಿದ್ದು, ಅದಕ್ಕೆ ಅನುಸಾರವಾಗಿಯೇ ಸಿದ್ಧಿಯೂ ಇರುತ್ತದೆ ಎಂಬ ಸತ್ಯವನ್ನು ಯಾರೂ ಮರೆಯಬಾರದು.

ಸಂತೃಪ್ತ ಮನಸ್ಸಿನ ಸುಖೀ ಜೀವನ ಮನುಷ್ಯ ಜೀವನದ ಮುಖ್ಯ ಗುರಿಯಾಗಿದೆ. ಆದರೆ ಕಲಿಕೆಯ ವಿಚಾರದಲ್ಲಿ ಮಾತ್ರ ಮನುಷ್ಯ ಅತೃಪ್ತನಾದಷ್ಟೂ ಹೆಚ್ಚು ಹೆಚ್ಚು ಕಲಿಯುತ್ತಾನೆ. ಕಲಿಯಬೇಕೆಂಬ ತೀವ್ರ ಬಯಕೆ, ಗುರುವಿನಲ್ಲಿರುವ ವಿದ್ಯೆಯ ಸಾರವನ್ನೆಲ್ಲ ಹೀರಿಕೊಳ್ಳುವ ದಾಹ ಜ್ಞಾನ ಪಿಪಾಸುವಿನ ದಾಗಿರಬೇಕು. ಆಲಸ್ಯಕ್ಕಾಗಲೀ, ಕಾಲಹರಣಕ್ಕಾಗಲೀ ಎಡೆ ಕೊಡದಂತೆ ಅವಕಾಶ ಮತ್ತು ಸಮಯಗಳ ಸದ್ವಿನಿಯೋಗ ಮಾಡಿಕೊಳ್ಳಬೇಕು. ಏಕೆಂದರೆ ಒಬ್ಬ ವ್ಯಕ್ತಿಯ ಜೀವನದಲ್ಲಿ ವಿದ್ಯೆ ಕಲಿಯುವ ಅವಕಾಶ ಮತ್ತು ಸಮಯಗಳು ಒಂದು ನಿರ್ದಿಷ್ಟ ಅವಧಿಯಲ್ಲಿ ಸಿಗುತ್ತದೆ. ಆನಂತರ ಶಾರೀರಿಕ ಮಾನಸಿಕ ದೌರ್ಬಲ್ಯಗಳು ಹಾಗೂ ಜೀವನದಲ್ಲಿ ಎದುರಾಗುವ ಇತರೆ ಸಮಸ್ಯೆ ಗಳಿಂದಾಗಿ ಕಲಿಯುವ ಇಚ್ಛೆ ಇದ್ದರೂ ಸಾಧ್ಯವಾಗದೇ ಹೋಗಬಹುದಾದ ಸಂಭವ ಹೆಚ್ಚಾಗಿರುತ್ತದೆ. ಹಾಗೆಂದು ಜೀವನದಲ್ಲಿ ನಾವು ಕಲಿಯುವುದು ಎಂದಿಗೂ ಮುಗಿಯು ವುದಿಲ್ಲ. ಆದರೆ ಅದು ಬದುಕು ಕಲಿಸುವ ಪಾಠವಾಗಿರುತ್ತದೆ. ಈ ಬದುಕಿನ ಪಾಠವೂ 'ಔಪಚಾರಿಕ ಶಿಕ್ಷಣ' (Normal education) ದಷ್ಟೇ ಮುಖ್ಯವಾಗಿದ್ದು ಹಾಗೆ ಕಲಿಯದವರು ನಿಜಕ್ಕೂ ಮೂರ್ಖರೆನ್ನಬಹುದು.

ಒಂದು ವಿದ್ಯೆಯಲ್ಲಿ ಸಾಕಷ್ಟು ತಿಳುವಳಿಕೆ ಉಂಟಾಗಿದೆ ಎಂಬ ನಂಬಿಕೆ ಬಂದ ಮೇಲೆ ಆಸಕ್ತಿ ಇದ್ದವರು ಅದರಲ್ಲೇ ಆಳವಾದ ಅಧ್ಯಯನ ನಡೆಸುತ್ತ, ವಿಶೇಷ ಜ್ಞಾನ ಗಳಿಸುತ್ತ, ಹೊಸ ಹೊಸ ಸಂಶೋಧನೆಗಳನ್ನು ಮಾಡಿ ಜ್ಞಾನಿಗಳಾಗ ಬಹುದು, ವಿಜ್ಞಾನಿಗಳಾಗಬಹುದು. ಇದನ್ನು ಅವರವರೇ ಗಳಿಸಿಕೊಳ್ಳಬೇಕು. ಶಿಕ್ಷಣ ಹಾಗೂ ವಿದ್ಯೆಯ ಕಲಿಕೆಯಿಂದ ಇದು ಸಾಧ್ಯ. ಕಲಿತ ವಿದ್ಯೆಯನ್ನು ಸಕಾಲದಲ್ಲಿ ಸದುಪಯೋಗ ಪಡಿಸಿಕೊಳ್ಳುವವರು, ತನ್ಮೂಲಕ ತಮ್ಮ ಬುದ್ಧಿಮಟ್ಟವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುವವರೇ ನಿಜವಾದ ಜ್ಞಾನಿಗಳೆನಿಸಿಕೊಳ್ಳುತ್ತಾರೆ. ಈ ರೀತಿ ಒಬ್ಬ ವ್ಯಕ್ತಿಯನ್ನು ಜ್ಞಾನಿಯನ್ನಾಗಿಸುವುದೇ ನಿಜವಾದ ಶಿಕ್ಷಣವೆನಿಸುತ್ತದೆ.

ಎಲ್ಲಕ್ಕಿಂತ ಮುಖ್ಯವಾದ ಸಂಗತಿಯೊಂದನ್ನು ಎಲ್ಲರೂ ಗಮನದಲ್ಲಿಟ್ಟುಕೊಳ್ಳುವುದು ಅಗತ್ಯ ಮತ್ತು ಒಳ್ಳೆಯದು ಕೂಡ. ಯಾವುದೇ ವಸ್ತುವನ್ನು ಇನ್ನೊಬ್ಬರಿಗೆ ಕೊಟ್ಟಾಗ ಆ ಮಟ್ಟಿನ ಕೊರತೆ ಉಂಟಾಗುವುದು ಸಹಜ. ಆದರೆ ಪಡೆದ ಶಿಕ್ಷಣ, ಕಲಿತ ವಿದ್ಯೆ, ಗಳಿಸಿದ ಜ್ಞಾನ ಇವು ಎಂದಿಗೂ ಕ್ಷಯವಾಗದಂಥ ಆಸ್ತಿ. ಇದನ್ನು ಯಾರೂ ಕದಿಯಲಾರರು, ಕಸಿಯಲಾರರು. ವಿಶೇಷವೆಂದರೆ ದಾನ ಮಾಡಿದಷ್ಟೂ ಕಮ್ಮಿಯಾಗುವ ಬದಲು ಹೆಚ್ಚಾಗುವಂಥ ಅಕ್ಷಯ ನಿಧಿ ಎಂದರೆ ಜ್ಞಾನ! ಗಳಿಸಿದರೆ ಇಂತಹ ಆಸ್ತಿಯನ್ನು ಗಳಿಸಬೇಕು !!.

✠

### ಶ್ರೀವಾಣಿ

ಜ್ಞಾನ ಶ್ರೇಷ್ಠ ರತ್ನ. ನಿಜವಾದ ಆಭರಣ. ಮೌಲ್ಯವುಳ್ಳ ವಸ್ತು. ಮನುಷ್ಯನನ್ನು ಪ್ರಾಣಿಗಳಿಂದ ಪ್ರತ್ಯೇಕಿಸುವ ಶ್ರೇಷ್ಠಜ್ಞಾನ. ಪರಮಾತ್ಮ ಮನುಷ್ಯನಿಗೆ ಜ್ಞಾನ ಕರುಣಿಸಿ ಪ್ರಾಣಿಗಳೆಲ್ಲಾ ಮನುಷ್ಯನಿಗೆ ಮೊದಲ ಸ್ಥಾನವನ್ನು ದೊರಕಿಸಿದ. ಪರಮಾತ್ಮ ನೀಡಿದ ವಿಶೇಷ ವರ ಜ್ಞಾನ. ಜ್ಞಾನಾಭಿವೃದ್ಧಿ ಮಾಡಿಕೊಂಡು ಜೀವನದಲ್ಲಿ ಬೆಳಕು ಕಾಣುವುದು ಮಾನವನ ಗುರಿ.





## ಬಸವಣ್ಣನವರ ಹಾಗೂ ಅಕ್ಕಮಹಾದೇವಿಯವರ ವಚನಗಳಲ್ಲಿ ವೈಜ್ಞಾನಿಕ ಅಂಶಗಳು

### ಬಸವಣ್ಣನ ವಚನವೊಂದರಲ್ಲಿ ಭ್ರೂಣ ಶಾಸ್ತ್ರದ ಪ್ರಸ್ತಾಪ

–ಡಾ॥ ವ್ಹಿ.ವ್ಹಿ. ಬಾಗಲಕೋಟಿ, ವಿಶ್ವಚೇತನ ಪ್ರಕಾಶನ, ಕಲ್ಯಾಣ್ ಹೌಸಿಂಗ ಕಾಲೋನಿ, ಗೋಕಾಕ-೫೯೧೩೦೭.

ಕೆಳಗೆ ಅಚ್ಚಾದ ಬಸವಣ್ಣನವರ ವಚನವನ್ನು ಗಮನಿಸಿರಿ

*ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ*
*ಜಲಬಿಂದುವಿನ ವ್ಯವಹಾರ ಒಂದೇ,*
*ಆಶೆ ಆಮಿಷ ರೋಷ ಹರುಷ ವಿಷಯಾದಿಗಳೆಲ್ಲ*
*ಒಂದೇ,*

*ಏನನೋದಿ ಏನ ಕೇಳಿ ಏನು ಫಲ ?*
*ಕುಲಜನೆಂಬುದಕೆ ಆವುದು ದೃಷ್ಟ ?*
*ಸಪ್ತಧಾತುಸಮಂ ಪಿಂಡಂ ಸಮಯೋನಿಸಮುದ್ಭವಂ ।*
*ಆತ್ಮಜೀವಸಮಾಯುಕ್ತಂ ವರ್ಣಾನಾಂ ಕಿಂ*
*ಪ್ರಯೋಜನಂ॥*

*ಎಂಬುದಾಗಿ,*
*ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ,*
*ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ,*
*ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ ?*
*ಇದು ಕಾರಣ ಕೂಡಲಸಂಗಮದೇವಾ*
*ಲಿಂಗಸ್ಥಲವರಿದವನೆ ಕುಲಜನು.*

ಇಲ್ಲಿ ಹುಟ್ಟಿನಿಂದ ಮೇಲು ಕೀಳು ಕುಲ ಎಂದೆಣಿಸುವ ಆಗಿನ ಕಾಲದ ಸಮಾಜದಲ್ಲಿದ್ದ ವಿಚಾರ ಆಚಾರಗಳನ್ನು ಖಂಡಿಸಿ, ತರ್ಕಬದ್ಧ ವಾಗಿ ಆಧಾರಸಹಿತ ಕಟುಟೀಕೆಗೆ ಒಳಪಡಿಸಿದ ವಾದವನ್ನು ಬಿಚ್ಚು ಮಾತುಗಳಲ್ಲಿ ಮಂಡಿಸಿದ್ದಾರೆ ಅಣ್ಣನವರು.

ಮಾನವಸಹಿತ ಸರ್ವಪ್ರಾಣಿಗಳ ಜನನವನ್ನು ತಿಳಿಸುವಾಗ ಭ್ರೂಣ (ಪಿಂಡಕ್ಕೆ) ಆಶ್ರಯವಾದದ್ದು ಪ್ಲೆಸೆಂಟಾ ಎಂದು ಪ್ರಾಣಿ ಶಾಸ್ತ್ರಜ್ಞರು ಕರೆಯುವ ವಸ್ತು ಹೊಲೆಯಲ್ಲವೇ? ಎಂದಿದ್ದಾರೆ. ಈ ವಸ್ತುಸ್ಥಿತಿ ಸಾರ್ವತ್ರಿಕವಾದದ್ದು, ಕುಲಾತೀತ ವಾಗಿ ಎಲ್ಲರಿಗೂ ಅನ್ವಯಿಸುವಂಥದ್ದು, ಭ್ರೂಣ ಉತ್ಪಾದನಾ ಕ್ರಿಯೆಯಲ್ಲಿಯ ವಿವಿಧ ಘಟ್ಟಗಳನ್ನು ಹೆಸರಿಸಿ, ಪಿಂಡೋದ್ಭವ ಪೂರ್ವದ ಮನೋ ವಿಕಾರಗಳಾದ ಆಶೆ, ಆಮಿಷ, ರೋಷ, ಹರುಷಾದಿಗಳು ಸರ್ವರಲ್ಲಿಯೂ ಸಮವಾದುವುಗಳೆಂದು ತಿಳಿಸಿ, ಸಂಸ್ಕೃತ ಹೇಳಿಕೆಯಲ್ಲಿ ಕೂಡ ಪಿಂಡೋತ್ಪಾದನೆ, ಯೋನಿಯಿಂದ ಉದ್ಭವಗಳೆಲ್ಲ ಸರ್ವಕುಲಗಳಲ್ಲಿ ಸಮವಿದ್ದಾಗ ಆತ್ಮಜೀವ ಒಂದಾದಾಗ ವರ್ಣಭೇದವೇಕೆ? ಎಂದು ಕೇಳಿದ್ದಾರೆ. ಮುಂದುವರೆದು, ವಿವಿಧ ಕಸಬು(ಕಾಯಕ) ಗಳಿಗೆ, ತಮ್ಮವೇ ಆದ ಕಾಯಕತಂತ್ರಗಳಿವೆ. ಅವುಗಳಲ್ಲಿ ಮೇಲೆ ಕೆಳಗೆ ಎಂದು ಎಣಿಸುವುದು ತರ್ಕಬದ್ಧವಲ್ಲವೆಂಬ ವಾದವನ್ನು ಒತ್ತಿ ಹೇಳಿದ್ದಾರೆ. ಅವುಗಳನ್ನು ಲಿಂಗಸ್ಥಲವ ಅರಿದವನು ಕುಲಜನೆಂದೂ, ಕುಲವನ್ನು ನಿರ್ಧರಿಸುವ ಸಕಾರಾತ್ಮಕ ಸೂಚನೆಯನ್ನು ಮುಂದಿಟ್ಟಿದ್ದಾರೆ.

ಹೀಗಿದ್ದಾಗ ಕಸಬಿನ ಮೇಲಿಂದ ಕುಲವನೆಣಿಸಿ ಅವನಿಗೆ ಜೀವಪರ್ಯಂತ ಮೇಲು ಕೀಳು ಎಂದು ಮುದ್ರೆಯೊತ್ತುವುದು ಯಾವ ನ್ಯಾಯವೆಂದು? ಸೂಕ್ಷ್ಮವಾಗಿ ಕೇಳಿದ್ದಾರೆ.

ಇನ್ನೊಂದು ವಿಷಯವೆಂದರೆ, ಹುಟ್ಟಿದ ಮಗುವಿಗೆ ತಾನು ಎಲ್ಲಿ ಹುಟ್ಟುತ್ತಿರುವೆನೆಂದು ಗೊತ್ತಿಲ್ಲ. ತನಗೆ ನಿಯಂತ್ರಣವಿಲ್ಲದ ಹುಟ್ಟಿಗಾಗಿ, ಜೀವನಪರ್ಯಂತ ಸುಖ ಇಲ್ಲವೆ ದುಃಖಕ್ಕೆ ಕಾರಣ ವಾಗಬೇಕೆ? ಎಂಬುದನ್ನು ಗಮನಿಸಿ, ಜ್ಞಾನವನ್ನು ಮುಂದಿಟ್ಟು ಸಮಾಜದಲ್ಲಿಯ ಅಜ್ಞಾನದ ಕೇಡನ್ನು ತೋರಿಸಿಕೊಟ್ಟಿದ್ದಾರೆ.

ಸಾಮಾಜಿಕ ವಿಷಯವೊಂದನ್ನು ವಿಶ್ಲೇಷಿಸುತ್ತಿರುವಾಗ, ಜೀವವಿಜ್ಞಾನದ ವಲಯದಲ್ಲಿಯ ಭ್ರೂಣ ಶಾಸ್ತ್ರದ ಬಗ್ಗೆ ಕೂಲಂಕುಶವಾಗಿ ವಿವರಿಸಿ ವೈಜ್ಞಾನಿಕ ವಿಷಯ ಆಧಾರವಾಗಿಟ್ಟು ಸಾಮಾಜಿಕ ಸುಧಾರಣೆಗೆ ನಿರ್ಣಯವನ್ನು ತಿಳಿಸಿದ್ದಾರೆ, ಪ್ರಸಕ್ತ ಕೃತಿಯಲ್ಲಿ, ವೈಜ್ಞಾನಿಕ ವಿಷಯಗಳ ಧರ್ಮದೊಡನೆಯ ಸಂಯೋಜನೆಯು, ಆಸಕ್ತಿಯ ವಿಷಯವಾಗಿದೆ.

–ಮುಂದುವರೆಯುತ್ತದೆ.

### ಸೋಮೇಶ್ವರ ಶತಕ

*ಧನಕಂ ಧಾನ್ಯಕೆ ಭೂಷಣಾಂಬರ ಸುಪುಷ್ಪಂಗಳ್ಗೆ*
*ಮೃಷ್ಟಾನ್ನ ಭೋ ।*
*ಜನಕಂ ಸತ್ಫಲಕಂಜನಾದಿಯನುಲೇಪಂಗಳ್ಗೆ*
*ಸಮ್ಮೋಹ ಸಂ ॥*
*ಜನಕಾನಂದಕೆ ರಾಜಭೋಗಕೆ ಸುವಿದ್ಯಂಗಳ್ಗ*
*ದಾರಾಮೊಡಂ ॥*
*ಮನದೊಳ್ ಕಾಮಿಸದಿರ್ಪರೇ ಹರಹರಾ*
*ಶ್ರೀ ಚೆನ್ನಸೋಮೇಶ್ವರಾ ॥*

ಧನ, ಧಾನ್ಯ, ಅಲಂಕಾರ, ವಸ್ತ್ರ, ಸುಗಂಧವುಳ್ಳ ಹೂ, ಒಳ್ಳೆಯ ಪದಾರ್ಥಗಳ ಊಟ, ಉತ್ತಮವಾದ ಹಣ್ಣು, ಕಾಡಿಗೆ ಮೊದಲಾದ ಬಳಿದುಕೊಳ್ಳುವ ಸುವಾಸನೆ ದ್ರವ್ಯಗಳು, ಸಮ್ಮೋಹವನ್ನು ಹುಟ್ಟಿಸುವ ಆನಂದ, ರಾಜಭೋಗ, ಸುವಿದ್ಯೆ ಇವುಗಳನ್ನು ಮನಸ್ಸಿನಲ್ಲಿ ಬಯಸದಿರುವವರು ಯಾರೂ ಇಲ್ಲ.

# ಸ್ವಯಂಚಾಲಿತ ಕಾರುಗಳು !!!

-ಶ್ರೀಮತಿ ಬಿ.ಜಿ. ಪಂಚರತ್ನ ಬಿ.ಇ., ತಾಂತ್ರಿಕ ಅಧಿಕಾರಿ, ಡಿ.ಆರ್.ಡಿ.ಓ. ಬೆಂಗಳೂರು.

ಈ ಅತ್ಯಾಧುನಿಕ ಯುಗದಲ್ಲಿ ನಾವು ಸ್ವಯಂ ಚಾಲಿತ ಕಾರುಗಳನ್ನು ಕಾಣಬಹುದು!. ಹೇಗೆಂದರೆ, ಅದು ಕಂಪ್ಯೂಟರ್ ಚಾಲಿತವಾದುದು. ಕಾರಿನ ಕಂಟ್ರೋಲ್‌ಗಳನ್ನು ಅಂದರೆ ಎಡ, ಬಲ, ಹಿಂದೆ, ಮುಂದೆ, ವೇಗವಾಗಿ, ವಿಧಾನವಾಗಿ, ಇಂತಿಂತಹ ಗೇರ್‌ಗಳಲ್ಲಿ ಇಷ್ಟಿಷ್ಟೇ ವೇಗದಲ್ಲಿ ಓಡಬೇಕು. ಮುಂದೆ ಏನಾದರೂ ತಡೆ, ಹುಬ್ಬು, ಹಳ್ಳ ಇದ್ದರೆ ಸಂಭಾಳಿಸಬೇಕು ಎಂದೆಲ್ಲಾ ಕರಾರುವಾಕ್ಕಾಗಿ ನಿರೂಪಿಸಿ ಕಾರಿಗೆ ಪುಟ್ಟ ರಾಡಾರ್ ಸಾಧನವನ್ನು ಅಳವಡಿಸಿ, ಅದಕ್ಕೆ ಸಂದೇಶಗಳನ್ನು ಮುಂದಾಗಿಯೇ ನೀಡುವುದು. ಹಾಗೂ ಅದರ ಒಡಲಿನಲ್ಲಿ ಮಾರ್ಗನಕ್ಷೆಯನ್ನು ಸಂಗ್ರಹಿಸಿಡುವುದು. ಇದರಲ್ಲಿ ಚಾಲಕನ ಪಾತ್ರ ಅತಿ ಕಡಿಮೆ. ಕಂಪ್ಯೂಟರ್ ಪಾಲಿಸುವ ಸಂದೇಶಗಳನ್ನು ಬದಲಿಸಬೇಕಾದಲ್ಲಿ ಅವನು ಆ ಕಾರ್ಯವನ್ನು ಕಂಪ್ಯೂಟರ್ ಮೂಲಕವಾಗಲಿ ಇಲ್ಲವೇ ಸ್ವತಃ ತಾನೇ ಆಗಲಿ ಮಾಡಬಹುದಾಗಿದೆ. ಪೂರ್ವದಲ್ಲಿ ಇಂತಹ ಪ್ರಯೋಗಗಳಾಗಿವೆ.

ನಾವೀಗ ಇನ್ನೊಂದು ಹೊಸ ವಿದ್ಯಮಾನವನ್ನು ನೋಡಬಹುದಾಗಿದೆ. ಅದೇನೆಂದರೆ ಸ್ವಯಂಚಾಲಿತ ಕಾರಿನ ಏರ್‌ಕಂಡೀಷನರ್‌ಗಳು! ಏನು ಹವಾನಿಯಂತ್ರಕ ತನಗೆ ತಾನೇ ವಿದ್ಯುಚ್ಛಕ್ತಿಯಿಲ್ಲದೆ ಕೆಲಸ ಮಾಡಬಲ್ಲದೆ? ಸಾಧ್ಯ ಎನ್ನುತ್ತಾರೆ ತಜ್ಞರು. ಅದು ಹೇಗೆಂದರೆ 'ಫಿಜೋ' ಎಂಬ ವಿಶಿಷ್ಟ ಹರಳುಗಳ ಸಹಾಯದಿಂದ! ಇವು ಆಯತಾಕಾರ ದಲ್ಲಿದ್ದು




ತಮ್ಮ ಎರಡು ಪಾರ್ಶ್ವಗಳಿಗೆ ಯಾಂತ್ರಿಕ ಶಕ್ತಿಯನ್ನು ಒಳಪಡಿಸಿದರೆ ಅವು ತಮ್ಮ ವಿರುದ್ಧ ದಿಕ್ಕಿನಲ್ಲಿ ವಿದ್ಯುಚ್ಛಕ್ತಿಯನ್ನು ಬೀರುತ್ತವೆ. ಈ ಉಪಾಯವನ್ನು ಯಥಾವತ್ತಾಗಿ ಬಳಸಿಕೊಳ್ಳುವುದು. ಕಾರಿನ ಆಘಾತ ಹೀರುವಿಕಾ ವಸ್ತುಗಳೊಂದಿಗೆ ಅಂದರೆ Shock obsorber ಗಳಿಗೆ ಯುಕ್ತವಾಗಿ ಈ ಫಿಜೋ ವಸ್ತು ಗಳನ್ನು ಪೇರಿಸಿಡುವುದು. ಕಾರು ಓಡುವಾಗ ಆಗುವ ಆಘಾತ ಶಕ್ತಿಯಿಂದ ಉಂಟಾಗುವ ವಿರುದ್ಧ ದಿಕ್ಕಿನ ವಿದ್ಯುತ್ ಪ್ರವಾಹ ವನ್ನು ಯುಕ್ತವಾದ ಸರ್ಕ್ಯೂಟ್ ಜಾಲದಿಂದ ಹವಾ ನಿಯಂತ್ರಕದ Input ಗೆ ನೀಡುವುದು. ಕಾರು ವೇಗವಾಗಿ ಓಡುತ್ತಿರುವಂತೆ ಹೆಚ್ಚು ಹೆಚ್ಚು ಶಕ್ತಿ ಪ್ರವಹಿಸುತ್ತದೆ. ಅದರ ಒಂದು ಭಾಗವನ್ನು ಶೇಖರಿಸಿಟ್ಟುಕೊಂಡು ಕಾರು ಚಾಲನೆಯಲ್ಲಿಲ್ಲದಾಗ ಅದನ್ನು ಹವಾ ನಿಯಂತ್ರಕಕ್ಕೆ ಪೂರೈಸಲು ಅನುವಾಗುವುದು. ಹೇಗಿದೆ ಉಪಾಯ !?

ಈ ನಿಟ್ಟಿನಲ್ಲಿ ಹಲವಾರು ಪ್ರಯೋಗಗಳು ಭರದಿಂದ ಸಾಗುತ್ತಿವೆ. 40 ಪೇರಿಸಿಟ್ಟ ಫಿಜೋ ವಸ್ತುವಿನ ಚೌಕಗಳು (ಅದರ ಪ್ರತಿ ವಿಸ್ತೀರ್ಣ 116 $Cm^2$) ಪ್ರತಿ 68 ಕೆ.ಜಿ. ತೂಕಕ್ಕೆ ಪ್ರತಿ ಐದು ಸೆಕೆಂಡುಗಳಿಗೆ 1.5 ವ್ಯಾಟ್‌ಗಳಷ್ಟು ಶಕ್ತಿಯನ್ನು ಪೂರೈಸುತ್ತದೆ ಎಂದು ಪ್ರಯೋಗಗಳು ನಿರೂಪಿಸಿವೆ. ಈ ಕ್ಷೇತ್ರದಲ್ಲಿ ಕ್ವಾರ್ಟ್ಜ್(Quartz), ರೋಚಲೆ (Rochele) ಬೇರಿಯಮ್ ಟಿಟಾನೇಟ್, ಇತ್ಯಾದಿಗಳು ಫಿಜೋ ಗುಣವನ್ನು ಹೊಂದಿವೆ.

ಕಡಿಮೆ ಖರ್ಚಿನ ಅಧಿಕ ಉತ್ಪತ್ತಿ ನೀಡಬಲ್ಲ ಯೋಗ್ಯ ಫಿಜೋ ವಸ್ತುಗಳಿಗಾಗಿ ಸಂಶೋಧನೆಗಳಾಗುತ್ತಿವೆ. ಮುಂದೆ ಇದೇ ಉಪಾಯವನ್ನು ಇತರೆ ಇಂಜಿನಿಯರಿಂಗ್ ಕಾರ್ಯಕ್ಷೇಪಕ್ಕೂ ಅಳವಡಿಸಿಕೊಳ್ಳಬಹುದಾಗಿದೆ. ಶಕ್ತಿಯ ಕೊರತೆ ನಮ್ಮ ಭಾರತದಲ್ಲಿ ಮಾತ್ರವಲ್ಲ; ಅದು ವಿಶ್ವದ ಮುಂದುವರಿದ ರಾಷ್ಟ್ರಗಳನ್ನೂ ಕಾಡದೆ ಬಿಟ್ಟಿಲ್ಲ. ಈ ದಿಶೆಯಲ್ಲಿ ಈ ಫಿಜೋ 'Technique', ಶಕ್ತಿಯ ಉಳಿತಾಯದೊಂದಿಗೆ ಪರಿಸರ ಮಾಲಿನ್ಯವನ್ನೂ ನಿವಾರಿಸುತ್ತದೆಯೆಂದು ತಜ್ಞರು ಆಶಿಸುತ್ತಾರೆ. ಮುಂಬರುವ ದಿನಗಳಲ್ಲಿ ಕಲ್ಲಿದ್ದಲು, ತೈಲಗಳಂತಹ ಇಂಧನ ಮೂಲಗಳು ಖಾಲಿಯಾಗಬಹುದು. ಅದಕ್ಕೆಂದೇ ವಿಜ್ಞಾನಿಗಳು ಬಹು ಹಿಂದಿನಿಂದಲೂ ಬದಲೀ ಶಕ್ತಿ ಮೂಲಗಳಿಗಾಗಿ ಬಹುವಾಗಿ ಶ್ರಮಿಸ ಹತ್ತಿದ್ದರು. ಈ ನಿಟ್ಟಿನಲ್ಲಿ ಸೌರಶಕ್ತಿ, ಭೂಗರ್ಭಶಕ್ತಿ, (Geo-thermal energy) ಸಾಗರಶಕ್ತಿ (Tidal power) ವಾಯುಶಕ್ತಿ (wind power) ಗಳಲ್ಲದೆ ಜೈವಿಕ ವಸ್ತು ಶಕ್ತಿ Bio mass energy ಗಳ ಪ್ರಯೋಗಗಳಾದವು. ಕೆಲವು ಗೊತ್ತಾದ ಪ್ರಮಾಣದಲ್ಲಿ ಫಲವನ್ನೂ ನೀಡಿದವು. ಆದರೆ ಇದೀಗ Bio-mass (ಅಂದರೆ ಕೊಳೆಯುವ ಪದಾರ್ಥಗಳಾದ ಸಿಪ್ಪೆ, ಸೊಪ್ಪು, ಹುಲ್ಲು, ಸಗಣಿ, ಇತ್ಯಾದಿ, ಇತ್ಯಾದಿ) ಇವುಗಳನ್ನು ವಿಂಗಡಿಸಿ ಕಲೆಹಾಕಿ, ಸಂಸ್ಕರಿಸಿ,





ತಯಾರಿಸಲಾದ ಶಕ್ತಿ ಅಷ್ಟೇನೂ ಲಾಭದಾಯಕವಾಗಿಲ್ಲ. ಎಂದು ಸಮೀಕ್ಷೆಯೊಂದು ತಿಳಿಸುತ್ತದೆ. ಅಲ್ಲದೆ ಈ ಕಾರ್ಯವಿಧಾನದಲ್ಲಿ ಉಂಟಾಗುವ ಧೂಮ, ಹೊಗೆಯು ಮತ್ತೆ ಮಾಲಿನ್ಯಕ್ಕೆ ಕಾರಣವಾಗುತ್ತದೆ ಎಂದೂ ಹೇಳಲಾಗಿದೆ.

ಇಂತಹ ಪರಿಸ್ಥಿತಿಯಲ್ಲಿ ಈ ಸಂದಿಗ್ಧದಲ್ಲಿ ಸೌರಶಕ್ತಿ ಎಂದೂ ಖಾಲಿಯಾಗುವುದಿಲ್ಲ. ಕೊಂಚವೂ ಪರಿಸರ ಮಾಲಿನ್ಯವಿಲ್ಲ. ಅದಾಗ್ಯೂ ಸೌರಶಕ್ತಿಯಿಂದ ವಿದ್ಯುಚ್ಛಕ್ತಿ ಪಡೆಯಬಲ್ಲ ಕಾರ್ಯಕ್ಷಮತೆ (Efficiency) ಅತಿ ಕಡಿಮೆ. ಆದ್ದರಿಂದಲೇ ಇದು ಅಷ್ಟೊಂದು ಜನಪ್ರಿಯವಾಗಿಲ್ಲ ಎಂದು ಹೇಳಲಾಗಿದೆ. ಈ ನಿಟ್ಟಿನಲ್ಲಿ ಇದರ ಬಳಕೆ ಎಲ್ಲಾ ಕಡೆಗೂ ಅನ್ವಯವಾಗದು ಎಂದೂ ತಿಳಿದು ಬಂದಿದೆ. ಅಲ್ಲದೆ ಇಂತಹ ಘಟಕಗಳ ಮೂಲಬೆಲೆ ಅತಿ ಹೆಚ್ಚು. ಉರವತ್ತಿಯಾದರೋ ಅತಿ ಕಡಿಮೆ. ಆದರೂ ಸೌರ ಚಾಲಿತ ವಾಹನಗಳು, ರೆಫ್ರಿಜರೇಟರ್‌ಗಳು(ಶೀತಕ) ಹೀಟರ್‌ಗಳು, ದೀಪಗಳು, ಉಪ್ಪು ನೀರಿನಿಂದ ಉಪ್ಪು ರಹಿತ ನೀರನ್ನು ನೀಡಬಲ್ಲ De-salination bath ಗಳು, ಸೌರ ಚಾಲಿತ ವಿವಿಧ ಬಗೆಯ ಕಂಟ್ರೋಲ್‌ಗಳು, ಸೌರಚಾಲಿತ ಹಬೆ ಯಂತ್ರಗಳು ಎಷ್ಟೋ ಕಡೆ ಕಾರ್ಯನಿರತವಾಗಿವೆ. ಅದೆಷ್ಟೋ ಮೆಗಾವಾಟ್ ವಿದ್ಯುಚ್ಛಕ್ತಿಯನ್ನು ಉಳಿತಾಯ ಮಾಡಿವೆ.

ಆಕಾಶದಲ್ಲೇ ದೊಡ್ಡ ಬೃಹತ್ ಬೋಗುಣಿಯಿಂದ ಸೌರ ಪರಿವರ್ತಿತ ವಿದ್ಯುಚ್ಛಕ್ತಿಯನ್ನು ಸಂಗ್ರಹಿಸಿಟ್ಟುಕೊಂಡು ಭೂಮಿಗೆ ಹರಿಸಿದರೆ ಹೇಗೆ?! ಈ ಬೋಗುಣಿಯನ್ನು ಸೂರ್ಯನಿಗೆ ಅಭಿಮುಖವಾಗುವಂತೆ ಆಯಾ ಕೋನಕ್ಕೆ ತಿರುಗಿಸಿಡುವಂತಿದ್ದರೇ ಇದು ಇನ್ನೂ ಅದ್ಭುತ! 24 ಗಂಟೆಗಳೂ ನಮಗೆ ವಿದ್ಯುತ್ ಪೂರೈಕೆಯಾಗುತ್ತಿರುತ್ತದೆ! ಇದೊಂದು ಸೋಜಿಗದ ಕಲ್ಪನೆ. ಆದರೂ ಪ್ರಯೋಗ ಪರೀಕ್ಷೆಗಳು ಇದು ಅಸಾಧ್ಯವೇನಿಲ್ಲ ಎಂದು ಸ್ಪಷ್ಟಪಡಿಸುತ್ತಿವೆ. ಈ ಗೋಳದಲ್ಲೆಲ್ಲೂ ಈ ಬಗ್ಗೆ ಅಧ್ಯಯನ ಪ್ರಯೋಗಗಳಾಗುತ್ತಿವೆ ಯೆಂದು ಹೇಳಲಾಗಿದೆ. ಮಾನವನಿಗೆ ಸಿಂಹದಷ್ಟು ಶಕ್ತಿಯಿಲ್ಲ, ಆನೆಯಷ್ಟು ಬಲವಿಲ್ಲ ಆದರೂ ಇವೆಲ್ಲವನ್ನೂ ಚಾಕಚಕ್ಯತೆಯಿಂದ, ಬುದ್ಧಿಶಕ್ತಿಯಿಂದ, ಗ್ರಹಿಕೆ, ಪ್ರತಿಭೆಯಿಂದ ಇವೆಲ್ಲವನ್ನು ಸ್ವಾಧೀನ ಮಾಡಿಕೊಂಡಿದ್ದಾನೆ. ಇಸವಿ 2100 ರ ಹೊತ್ತಿಗೆ ಥೇಟ್ ಮಾನವನಂತೇ ಇರುವ ರೋಬೋಟ್ ಮಾನವನೂ ತಯಾರಾಗುತ್ತಾನಂತೆ! ತನ್ನ ಜನ್ಮದಾತನಿಗೇ ಸಡ್ಡು ಹೊಡೆಯುವನಂತೆ! ವಿಜ್ಞಾನ ಹಾಗೂ ತಾಂತ್ರಿಕ ರಂಗ ವಿಸ್ಮಯ. ಅನಂತ... ಈ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಮುಂದೆ ತಿಳಿಯೋಣವೇ...!

✠

### ಎಲ್ಲೆಡೆ ನೀನಿದ್ದೀಯಾ, ಇದ್ದರೂ ಇಲ್ಲದಂತಾಗಿ ಕಾಣುವಿ

*ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ*
*ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ*
*ಶರೀರದೊಳಗಾತ್ಮನ ಕಾಣದಂತಿರಿಸಿದೆ*
*ನೀ ಬೆರಸಿದ ಭೇದಕ್ಕೆ ಬೆರಗಾದೆನ್ನೆ ರಾಮನಾಥಾ*
**–ಜೇಡರ ದಾಸಿಮಯ್ಯ**

ಜೇಡರ ದಾಸಿಮಯ್ಯನವರಿಗೆ ಹಿರಿಯ ವಚನಕಾರರೆನ್ನುವರು. ಬಸವಯುಗದಲ್ಲಿ ಮೊದಲು ಇವರ ವಚನಗಳು ದೊರೆತದ್ದರಿಂದ ಇವರಿಗೆ ಆದ್ಯ ವಚನಕಾರರೆನ್ನುವರು. ಸಂಸಾರ ಹೇಯವಲ್ಲ. ಜೇಡರ ದಾಸಿಮಯ್ಯನು, ಮಧುರ ದಾಂಪತ್ಯಕ್ಕೆ ಬಹಳ ಮಹತ್ವ ಕೊಟ್ಟಿದ್ದನು. ಜೇಡರ ದಾಸಿಮಯ್ಯ ಅತ್ಯುತ್ತಮ ವಿಚಾರವಂತ. ಅನೇಕ ವಿಷಯಗಳಲ್ಲಿ ಮಹಾನುಭಾವ ಬಸವಣ್ಣನವರು ದಾಸಿಮಯ್ಯನವರ ವಚನಗಳ ಆಸ್ತಿ ಭಾರತದ ಮೇಲೆ ಆಚಾರಗಳ ದಿವ್ಯ ಸೌಧವನ್ನು ಕಟ್ಟಿದರು. ಹೆಣ್ಣು ಗಂಡು ಸಮಾನ. ನಡುವೆ ಸುಳಿವ ಆತ್ಮಕ್ಕೆ ಗಂಡು–ಹೆಣ್ಣು ಎಂಬುದು ಇಲ್ಲವೆಂದು ಹೇಳಿದರು. ಮಾಂಸದಲ್ಲಿ ಹಾಲು, ಹಾಲಿನಲ್ಲಿ ತುಪ್ಪ ಮೊಗ್ಗಿನಲ್ಲಿ ಕಂಪು, ಎಳ್ಳಿನಲ್ಲಿ ಎಣ್ಣೆ ಮರೆಯಾಗಿರುವ ರೀತಿಯಲ್ಲಿ ಪರಮಾತ್ಮ ಸರ್ವವ್ಯಾಪಿಯಾಗಿದ್ದನೆಂದು ದೇವರ ಅಸ್ತಿತ್ವವನ್ನು ತೋರಿಸಿ, ಎಲ್ಲ ಶರಣರಿಗೆ ಮಾರ್ಗದರ್ಶಿಯಾದ. ವಿಶ್ವದ ಕಣ ಕಣಗಳಲ್ಲಿ ದೇವರು ವ್ಯಾಪಿಸಿದ್ದಾನೆ ಎಂದು ನಂಬಿದ ಜೇಡರ ದಾಸಿಮಯ್ಯ ಶರಣರು ಮುಂದುವರೆದು ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ. ಕಟ್ಟಿಗೆಯಲ್ಲಿ ಗುಪ್ತವಾಗಿ ಬೆಂಕಿ ಇದೆ. ಕಟ್ಟಿಗೆಗಳು ಒಂದಕ್ಕೊಂದು ಉಜ್ಜಿ, ಅದಕ್ಕೆ ಅಗ್ನಿ ಹಚ್ಚಿದರೆ ಅದು ಉರಿದು, ಆರಿಸಿ ಹೆಪ್ಪು ಹಾಕಿದ ಮೇಲೆ ಮೊಸರಾಗುವುದು. ಮೊಸರನ್ನು ಕಡಿದು, ಮಜ್ಜಿಗೆ ಮಾಡಿ, ಬೆಣ್ಣೆ ತೆಗೆದು, ಅದನ್ನು ಕಾಯಿಸಿದರೆ ತುಪ್ಪವಾಗುವುದು. ವಸ್ತುಗಳ ಸಂಸ್ಕಾರದಿಂದ ಈ ರೀತಿ ಫಲಿತಾಂಶ ಬಂದು ದೇವರ ಅಸ್ತಿತ್ವವನ್ನು ಹೊರಗೆಡಹಬಹುದು. ಶರೀರದೊಳಗೆ ಆತ್ಮ ಇದೆ. ಅದು ಚೈತನ್ಯ ಸ್ವರೂಪವಾಗಿ, ಜ್ಯೋತಿ ಸ್ವರೂಪವಾಗಿ ಇರುವುದು. ಆದರೆ ಅದು ಕಣ್ಣಿಗೆ ಕಾಣುವುದಿಲ್ಲ. ಅಗಮ್ಯ ಅಗೋಚರವಾಗಿದೆ. ಈ ದೃಷ್ಟಿಯಿಂದ ನಾವು ಪರಮಾತ್ಮನಿಗೆ ಕೃತಜ್ಞತೆ ತೋರಬೇಕು.

# ನೀರಿನ ಆಂತರಿಕ ಬಳಕೆ

–ಜಿ.ವಿ.ವಿ. ಶಾಸ್ತ್ರಿ

'ನಿಸರ್ಗ ಯೋಗಧಾಮ' ನಂ. ೨/೨೦೫೫, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

– ಮುಂದುವರೆದ ಭಾಗ

**ಬಾಯಾರಿಕೆ :**

ಮೆದುಳಿನಲ್ಲಿ ಒಣದ್ರಾಕ್ಷಿಯ ಗಾತ್ರದ ಒಂದು ಬೂದು ಬಣ್ಣದ ಅಂಗವಿದೆ. ಅದರ ಹೆಸರು ಹೈಪ್ರೋಥಲಾಮಸ್ (Hypothalamus) ಇದು ಶರೀರದ ನೀರಿನ ಸಮತೋಲನವನ್ನು ಕಾಪಾಡುವ ಅಂಗ. ಲವಣಮಿಶ್ರಿತ ನೀರಿನಲ್ಲಿ ಋಣ ಮತ್ತು ಧನ ವಿದ್ಯುದ್ವಾಹಕಗಳನ್ನಿಟ್ಟರೆ ವಿದ್ಯುತ್ ಉತ್ಪತ್ತಿಯಾಗುತ್ತದೆ ಎನ್ನುವುದು ಶಾಲಾ ಹುಡುಗನಿಗೂ ಗೊತ್ತಿರುವ ವಿಷಯ. ನಮ್ಮ ರಕ್ತದಲ್ಲಿ ಲವಣಗಳು ಕರಗಿವೆ. ನರಗಳಲ್ಲಿರುವ ವಿದ್ಯುತ್ ವಾಹಕಗಳ ಮುಖಾಂತರ ವಿದ್ಯುತ್ ಹರಿಯುತ್ತದೆ ಎನ್ನುತ್ತಾರೆ. ಇವುಗಳ ನಿಯಂತ್ರಣ ಹೈಪ್ರೋಥಲಾಮಸ್ಸಿನದು. ಶರೀರದಲ್ಲಿ ನೀರು ಕಡಿಮೆಯಾದರೆ ಹೈಪ್ರೋಥಲಾಮಸ್ಸಿನ ಡಿಟೆಕ್ಟರ್‌ಗಳು (ವಿದ್ಯುತ್ ತರಂಗಗಳನ್ನು ಅಳೆಯುವ ಸಾಧನಗಳು) ಗುರುತಿಸುತ್ತವೆ. ತಕ್ಷಣ ಶರೀರದ ನ್ಯೂರೋ ಟ್ರಾನ್ಸ್‌ಮೀಟರ್ ಗಳ ಮುಖಾಂತರ ಸಂದೇಶ ಶರೀರದ ಪೂರ್ತಿ ಪ್ರವಹಿಸುತ್ತವೆ. ಕೂಡಲೇ A.D.H. (Anti Diuretic Harmone) ಬಿಡುಗಡೆಯಾಗುತ್ತದೆ. ಲಾಲಾರಸ ಕಡಿಮೆಯಾಗಿ ಬಾಯಿ ಒಣಗುತ್ತದೆ. ಇದೇ ಬಾಯಾರಿಕೆಯ ಚಿನ್ಹೆ. ನೀರನ್ನು ಕುಡಿದರೆ ನೀರಿನ ಮಟ್ಟ ಏರುತ್ತದೆ. ತಕ್ಷಣ A.D.H. ಕಡಿಮೆಯಾಗುತ್ತದೆ. ಬಾಯಾರಿಕೆಯಾದಾಗ ಸ್ವಚ್ಛವಾದ ನೀರನ್ನು ಮಾತ್ರ ಕುಡಿಯಬೇಕು. ನಾಗರೀಕ ಮಾನವನು ಬಾಯಾರಿಕೆಯನ್ನು ತಣಿಸಲು ತರಹೇವಾರಿ ಪಾನೀಯಗಳನ್ನು ಕಂಡು ಹಿಡಿದಿದ್ದಾನೆ. ನೀರಿಗೆ ರುಚಿ ಕೊಡುವುದನ್ನು ಮರೆತನಲ್ಲ ಆ ಪರಮಾತ್ಮ! ಅವನ ಪುತ್ರ ಆ ಕಾರ್ಯವನ್ನು ಮಾಡಬೇಡವೇ? ಆದರೆ ಬುದ್ಧಿಯಿಲ್ಲದ ಪ್ರಾಣಿವರ್ಗ ಬರೀ ನೀರು ಕುಡಿದು ತಮ್ಮ ಬಾಯಾರಿಕೆಯನ್ನು ಇಂಗಿಸಿಕೊಳ್ಳುತ್ತವೆ. ನರನು ತಯಾರಿಸಿರುವ ಪಾನೀಯಗಳು ರಾಸಾಯನಿಕ, ನರ ಉತ್ತೇಜಕ, ಸಕ್ಕರೆ, ಲವಣಗಳಿಂದ ಕೂಡಿವೆ. ಇವುಗಳು ಶರೀರ ಸೇರಲು ಅಥವಾ ಇವುಗಳನ್ನು ಹೊರಕ್ಕೆ ಹಾಕಲು ಮತ್ತೆ ನೀರು ಬೇಕು. ಇಲ್ಲದಿದ್ದರೆ ಶರೀರದಲ್ಲಿನ ನೀರನ್ನು ಇವೇ ಕಬಳಿಸಿಬಿಡುತ್ತವೆ. ಇದರಿಂದ ಮತ್ತೆ ಬಾಯಾರಿಕೆ. ಮತ್ತೆ ಇಂತಹುದೇ ಪೇಯ!.

"Water quenches your thirsr without a calory. Alternatives like juice, iced Tea and Soda add needless calories to your diet" - 'ಯಾವುದೇ ಕ್ಯಾಲೋರಿಯನ್ನು ಸೇರಿಸದೆ ನೀರು ಬಾಯಾರಿಕೆಯನ್ನು ಕಳೆಯುತ್ತದೆ. ಅದಕ್ಕೆ ಬದಲು ಉಪಯೋಗಿಸುವ ರಸಗಳು, ಟೀ, ಸೋಡ ಮುಂತಾದವುಗಳು ದೇಹಕ್ಕೆ ಬೇಕಿಲ್ಲದ ಕ್ಯಾಲೋರಿ ಯನ್ನು ಆಹಾರಕ್ಕೆ ಸೇರಿಸುತ್ತದೆ'. -Mychael Tennison

*ಬಾಯಾರಿಕೆ ಶರೀರಕೆ ನೀರು ಬೇಕೆಂಬ ಭಾಷೆ*
*ಕೃತಕ ಪಾನೀಯಗಳಿಂದ ಇಂಗದು ತೃಷೆ*
*ಬಾಯಾರಿಕೆಗೆ ಬರದು ಮಾಡಲು ಹಸಿವಿನಷ್ಟು ಶಬ್ದ*
*ಈ ಚಿನ್ಹೆ ಅರ್ಥವಾಗದಿದ್ದರೆ ಗಂಟು ಬಿದ್ದಂತೆ*
*ನೀರ್ಗಳಿತವೆಂಬ ಪ್ರಾರಬ್ಧ.*

**ನೀರ್ಗಳಿತ (Dehydration)**

ಮಗುವಿಗೆ ನಿನ್ನೆಯಿಂದ ವಾಂತಿ, ಭೇದಿ ಡಾಕ್ಟರ ಎಚ್ಚರಿಕೆ, 'ಹುಷಾರ್, ಮಗುವಿಗೆ ಡೀಹೈಡ್ರೇಟ್ ಆಗುತ್ತದೆ, ಜೀವಜಲ ಕೊಡಿ.'

ಮಗುವಿಗೆ ಕೆಂಡಾಮಂಡಲ ಜ್ವರ, 'ಹೆಚ್ಚು ನೀರು ಕುಡಿಸಿ, ಎಳನೀರು ಕೊಡಿ, ಡೀಹೈಡ್ರೇಟ್ ಆದರೆ ಕಷ್ಟ'

ರೇಡಿಯೋ, ಟಿ.ವಿ. ಎಲ್ಲದರಲ್ಲೂ ಕೇಳಿ, ನೋಡಿ, ಈಗ ಹಳ್ಳಿಯವರಿಗೂ 'ಡೀಹೈಡ್ರೇಟ್' ಎಂಬ ಪದ ತಿಳಿದಿದೆ. ಆದರೆ ಅದರ ವ್ಯಾಪ್ತಿಯ ಬಗ್ಗೆ ಹೊಸ ಅನ್ವೇಷಣೆಗಳು ನಡೆಯುತ್ತಲೇ ಇದೆ. ಮೇಲೆ ಹೇಳಿದ ಸನ್ನಿವೇಶಗಳು ನೀರ್ಗಳಿತದ ತೀವ್ರವಾಗಬಹುದಾದ ಸ್ಥಿತಿ. ಇದಲ್ಲದೆ ನಮ್ಮ ಅರಿವಿಗೇ ಬರದೆ ನೀರ್ಗಳಿತವಾಗಿ ಉಂಟಾಗಬಹುದಾದ ತೊಂದರೆಯನ್ನು ಅಥವಾ ನೀರ್ಗಳಿತದ ಹೊಸ ವ್ಯಾಖ್ಯೆಯನ್ನು ಡಾ॥ ಎಫ್. ಬ್ಯಾಟ್ ಮಂಗೇಲ್‌ರವರು 'Your body's cries for water' ಎಂಬ ಪುಸ್ತಕದಲ್ಲಿ ವಿವರಿಸಿದ್ದಾರೆ. ಇವರ ಸ್ನೇಹಿತರು ಇವರನ್ನು ಬ್ಯಾಟ್‌ಮಾನ್ (Batman) ಎಂದು ಕರೆಯುತ್ತಾರೆ. ಅವರ ಜೀವನದ ವ್ಯಥೆಯೇ ಕಥೆಯಾದದ್ದು ಮಾನವನ ಪುಣ್ಯ. ಇವರು ಇರಾನಿನ ವೈದ್ಯರು. 1979ರಲ್ಲಿ ಇರಾನಿನ ಷಾ ಪತನದ ನಂತರ ಇವರನ್ನು ರಾಜಕೀಯ





ಕೈದಿಯಾಗಿ ಜೈಲಿಗೆ ಕಳುಹಿಸಲಾಯಿತು. ಅಲ್ಲಿ ಇವರಿಗೆ ಬಿಟ್ಟಿ ಊಟ ಕೊಡಲಿಚ್ಛಿಸದೆ ಕೈದಿಗಳಿಗೆ ಔಷಧಿಯನ್ನು ಕೊಡಲು ನಿಯೋಜಿಸಲಾಯ್ತು. ಒಮ್ಮೆ ಮಧ್ಯರಾತ್ರಿ, ಒಬ್ಬ ಕೈದಿ–ಕರುಳು ಹುಣ್ಣಿನ ರೋಗಿ, ನೋವನ್ನು ತಡೆಯಲಾರದೆ ಬಾಯಿ ಬಡಿದು ಕೊಂಡು ಡಾಕ್ಟರಲ್ಲಿಗೆ ಬಂದ. ಆಗ ಅಲ್ಲಿ ಯಾವುದೇ ಔಷಧ ವಿರಲಿಲ್ಲ. ಆಸ್ಪತ್ರೆಗಳಲ್ಲೇ ಔಷಧಗಳು ದೊರೆಯುವುದು ಕಷ್ಟ ಇನ್ನು ಜೈಲಿನಲ್ಲಿ ಸಮಯಕ್ಕೆ ಬೇಕಾದ ಔಷಧಿ ಸಿಕ್ಕುವುದು ಸುಲಭವೇ? ಅವನ ಸ್ಥಿತಿಯನ್ನು ನೋಡಲಾರದೆ ಎರಡು ಲೋಟ ನೀರನ್ನು ಔಷಧವೆಂದು ನಂಬಿಸಿ ಕುಡಿಸಲಾಯ್ತು. ಸ್ವಲ್ಪ ಹೊತ್ತಿನ ನಂತರ ಅವನಿಗೆ ನಿದ್ದೆ ಬಂತು. ಆದರೆ ಡಾಕ್ಟರಿಗೆ ನಿದ್ದೆ ಹೋಯ್ತು. ಅಷ್ಟೊಂದು ನೋವು ಕಡಿಮೆ ಯಾದದ್ದು ಹೇಗೆ ? ಅವನು ಕುಡಿಯುವ ನೀರಿನ ಪ್ರಮಾಣವನ್ನು ಹೆಚ್ಚಿಸಲಾಯ್ತು. ಕಡೆಗೆ ಒಂದು ದಿನ ಅವನ ಕರುಳು ಹುಣ್ಣೇ ಮಾಯವಾಯ್ತು. ಅನೇಕರ ಬೇರೆ, ಬೇರೆ ರೋಗಗಳಲ್ಲಿ ಈ ಪ್ರಯೋಗವನ್ನು ಮುಂದುವರಿಸಲಾಯ್ತು. ಡಾಕ್ಟರನ್ನು ಜೈಲಿನಿಂದ ಬಿಡುಗಡೆ ಮಾಡಿದರೂ ಅವರು ಹೊರಗೆ ಹೋಗಲು ಇಚ್ಛಿಸಲಿಲ್ಲ. ಮತ್ತೆ ನಾಲ್ಕು ತಿಂಗಳ ಕಾಲ ಜೈಲಿನಲ್ಲೇ ಇದ್ದು ಪ್ರಯೋಗಗಳನ್ನು ಮುಂದುವರೆಸಿದರು. ಅವರ ಪ್ರಯೋಗಗಳನ್ನು 'ಇರಾನಿನ ಮೆಡಿಕಲ್ ಕೌನ್ಸಿಲ್' ಮುದ್ರಿಸಿತು. ಅದನ್ನು ಲಂಡನ್ನಿಗೆ ಕಳುಹಿಸಲಾಯಿತು. ಅದು ಅಲ್ಲಿಂದ ಅಮೆರಿಕಾಗೆ ಪ್ರಯಾಣ ಮಾಡಿತು. ನಂತರ ಅವರೂ ಸಹ ಅದನ್ನೇ ಅನುಸರಿಸಿ ಅಮೆರಿಕಾ ಸೇರಿದರು. ಈಗ ಅವರು ವರ್ಜೀನಿಯಾದಲ್ಲಿ ವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

'ಎಲ್ಲಾ ದೀರ್ಘ ಕಾಯಿಲೆಗಳ ತಳದಲ್ಲಿ ದೀರ್ಘ ನೀರ್ಗಳಿತವಿರುತ್ತದೆ'. ಇದು ಅವರು ತಮ್ಮ ಪ್ರಯೋಗಗಳಿಂದ ತೆಗೆದುಕೊಂಡ ತೀರ್ಮಾನ ಅವರ ಪ್ರಯೋಗಗಳ ಫಲವೇ ಆ ಪುಸ್ತಕ.

'America is suffering from an epidemic of Chronic Dehydration. But that is not all. Heart burn, Headache, Joint and Back pain and Fatigue are not true diseases. They are dehydration induced disorders ....... I tell people. 'You are not sick- You are Thirsty'. ......It is a chronic dehydration that is root cause of many of the diseases we confront in medicine at present.... the Cholesterol build up on blood vessel walls is the body's natural defence against water loss'

–ಅಮೆರಿಕಾ ದೇಶವು ದೀರ್ಘ ನೀರ್ಗಳಿತವೆಂಬ ಸಾಂಕ್ರಾಮಿಕ ದಿಂದ ನರಳುತ್ತಿದೆ. ಬರೀ ಇಷ್ಟೇ ಅಲ್ಲದೇ ಹೊಟ್ಟೆ ಉರಿ, ತಲೆನೋವು, ಮಂಡಿನೋವು, ಬೆನ್ನುನೋವು ಮುಂತಾದು ವುಗಳು ನೀರ್ಗಳಿತದಿಂದ ಉಂಟಾದಂತಹ ಕಾಯಿಲೆಗಳು. ನಾನು ಜನಗಳಿಗೆ ಹೇಳುತ್ತೇನೆ. 'ನಿಮಗೆ ರೋಗವಿಲ್ಲ ಬಾಯಾರಿಕೆಯಾಗಿದೆ'. ಈಗಿನ ವೈದ್ಯಕೀಯದಲ್ಲಿ ಕಂಡು ಬರುವ ಅನೇಕ ಕಾಯಿಲೆಗಳಿಗೆ ಕಾರಣ ದೀರ್ಘ ನೀರ್ಗಳಿತ. ಶರೀರವು ನೀರನ್ನು ಕಳೆದುಕೊಳ್ಳುವ ಕ್ರಿಯೆಗೆ ವಿರುದ್ಧವಾದ ಹೋರಾಟದಲ್ಲಿ ರಕ್ತನಾಳಗಳ ಗೋಡೆಗೆ ಕಟ್ಟಿದುದೇ ಕೊಲೆಸ್ಟರಾಲ್' says Dr. Batman. 'Your body's crisis for water'.

ಅಮೆರಿಕಾದಲ್ಲಿ ಡಾ॥ ಬ್ಯಾಟ್‌ಮನ್‌ರವರನ್ನು ಹಾಸ್ಯ ಮಾಡಿದ ವೈದ್ಯರುಗಳೂ ಇದ್ದಾರೆ. ಆದರೆ ಈಚೆಗೆ ಅವರ ಮಾತುಗಳಿಗೆ ಬೆಲೆ ಬರುತ್ತಿದೆ. ಅವರಿಗೆ ಬ್ಯಾಟ್‌ಮನ್ ಅವರ ಮಾತು ಅರ್ಥವಾಗುತ್ತಿದೆ.

" More than half of the nation is walking around chronically mildly dehydrated.... minor shortage in your body can cause major health problems'. - "ದೇಶದ ಅರ್ಧಕ್ಕಿಂತ ಹೆಚ್ಚು ಪ್ರಜೆಗಳು ಕೊಂಚ ನೀರ್ಗಳಿತದಲ್ಲಿಯೇ ಓಡಾಡುತ್ತಿದ್ದಾರೆ. ಚಿಕ್ಕ ನೀರ್ಗಳಿತ ಮುಂದೆ ಆರೋಗ್ಯದಲ್ಲಿ ದೊಡ್ಡ ತೊಂದರೆಯನ್ನು ಉಂಟು ಮಾಡಬಲ್ಲದು. Susan M. Kleiner - Professor, Washington University. ಇವರೇ ಹಿಂದೆ ಬ್ಯಾಟ್‌ಮನ್ ರವರ ಮಾತನ್ನು ಒಪ್ಪಿರಲಿಲ್ಲ. ಈಗ ಅವರೇ ಮೇಲಿನಂತೆ ಹೇಳಿದ್ದಾರೆ.

ಶರೀರ ಬಾಯಾರಿಕೆಯ ಮೂಲಕ ತನ್ನ ನೀರಿನ ಅವಶ್ಯಕತೆಯನ್ನು ತಿಳಿಸುತ್ತದೆ. ಒಂದು ವೇಳೆ ಅದನ್ನು ನಾವು ಕೇಳಿಸಿಕೊಳ್ಳದಿದ್ದರೆ ?

ವಾಸೋಪ್ರೆಸಿನ್(Vasopressin)ಎಂಬ ಹಾರ್ಮೋನ್ ಮೂತ್ರ ಕೋಶದಲ್ಲಿ ಕೆಲಸ ಮಾಡಿ ನೀರಿನ ಪ್ರಮಾಣವನ್ನು ನಿಯಂತ್ರಿಸುತ್ತದೆ. ರೆನಿನ್ ಎಂಬ ಕಿಣ್ವವು ಮೂತ್ರಜನಕಾಂಗ ದಲ್ಲಿರುತ್ತದೆ. ಇದು 'ಆಂಜಿಯೋಟೆನೆಸಿನ್' ಎಂಬ ರಾಸಾಯನಿಕವನ್ನು ಶರೀರದಲ್ಲಿ ಬಿಡುಗಡೆ ಮಾಡುತ್ತದೆ. ನೀರು ಕಡಿಮೆ ಇದ್ದಾಗ, ಇದು ಮೂತ್ರಜನಕಾಂಗಗಳಲ್ಲಿ ರಕ್ತನಾಳಗಳು ಕುಗ್ಗಿ ಕಡಿಮೆ ನೀರು ಶೋಧಿಸುವಂತೆ ಮಾಡುತ್ತದೆ. ಆಗ ಮೂತ್ರವು ಕಡಿಮೆಯಾಗಿ, ಮಂದವಾಗಿ, ಹಳದೀ ಬಣ್ಣದಿಂದ ಕೂಡಿದುದು ಆಗುತ್ತದೆ. ಶರೀರದಲ್ಲಿ ತುರ್ತುಪರಿಸ್ಥಿತಿಗಾಗಿ ನೀರಿನ ಸಂಗ್ರಹವಿರುವುದಿಲ್ಲ. ಆದರೆ,

ಅದೇ ಆಹಾರದ ಸಂಗ್ರಹವಿರುತ್ತದೆ. ಆದ್ದರಿಂದಲೇ ಆಹಾರವಿಲ್ಲದಿದ್ದರೆ ಕೆಲವು ದಿನಗಳು ಇರಬಹುದು. ನೀರು ಕಡಿಮೆಯಾದಾಗ ಇರುವ ನೀರನ್ನೇ ಶರೀರದ ಅಂಗಗಳು ಹಂಚಿಕೊಳ್ಳಬೇಕಾಗುತ್ತದೆ. ಈ ಹಂಚಿಕೆ ಮಾಡಲು ಹಿಸ್ಟಮೀನ್, ನ್ಯೂರೋಟ್ರಾನ್ಸ್‌ಮೀಟರ್, ವಾಸೋಪ್ರೆಸೀನ್, ರೆನಿನ್, ಆಂಜಿಯೋಟೆನಿಸಿನ್, ಪ್ರೊಸ್ಟಾಗ್ಲ್ಯಾಂಡಿನ್ ಮುಂತಾದ ವ್ಯವಸ್ಥೆಗಳು ಶರೀರದಲ್ಲಿವೆ. ಮನೆಯಲ್ಲಿ ನೀರು ಕಡಿಮೆಯಿದ್ದಾಗ ನಾವೇನು ಮಾಡುತ್ತೇವೆ ? ಮುಖ್ಯ ಕಾರ್ಯಗಳಿಗೆ ನೀರನ್ನು ಉಪಯೋಗಿಸಿ, ಅಮುಖ್ಯ ಕಾರ್ಯಗಳನ್ನು ಮುಂದೂಡುತ್ತೇವೆ. ಇದೇ ನಿಯಮವನ್ನು ಶರೀರ ಅನುಸರಿಸುತ್ತದೆ. ಮುಖ್ಯ ಅಂಗಗಳಿಗೆ ನೀರನ್ನು ಪೂರ್ಣವಾಗಿ ಒದಗಿಸಿ ಅದಕ್ಕಿಂತ ಕೊಂಚ ಕಡಿಮೆ ಮುಖ್ಯ ಅಂಗಕ್ಕೆ ಕಡಿಮೆ ನೀರನ್ನು ಕೊಡುತ್ತದೆ. ಮೆದುಳಿಗೆ ಮೊದಲ ಪ್ರಾಶಸ್ತ್ಯ, ನಂತರ ಹೃದಯ, ಜೀರ್ಣಕ್ರಿಯೆ ಇತ್ಯಾದಿ. ಹೀಗೆ ಹಂಚುವಾಗ ಯಾವುದಾದರೊಂದು ಅಂಗಕ್ಕೆ ನೀರು ಕಡಿಮೆ ಬೀಳುತ್ತದೆ. ಆ ಅಂಗ ನೀರ್ಗಳೆತಕ್ಕೆ ಸಿಕ್ಕುತ್ತದೆ. ಈ ಅಂಗವು ತಕ್ಷಣ ಸಾಯುವುದಿಲ್ಲ. ಆದರೆ ತೊಂದರೆಗೆ ಸಿಕ್ಕುತ್ತದೆ. ನೋವು ಅದರ ಮೊದಲ ಪ್ರತಿಕ್ರಿಯೆ. ನೀರು ಸಾಲದೆಂದು ಆ ಅಂಗ ಸುರಿಸುವ ಕಣ್ಣೀರೇ ನೋವು. (ಕಣ್ಣೀರು ಸುರಿಸಲೂ ನೀರು ಬೇಕಲ್ಲ!) ಅದರ ಶಬ್ಧವನ್ನು ಕೇಳಿಸಿಕೊಳ್ಳದೆ ರುಚಿಕರವೆಂದು ಯಾವುದಾದರೂ ಒಂದು ಆಕರ್ಷಕ ಪೇಯವನ್ನು ನೀಡುತ್ತೇವೆ. ಆ ಪೇಯದಲ್ಲಿರುವ ಸಕ್ಕರೆ, ಉಪ್ಪು ಮತ್ತು ರಾಸಾಯನಿಕಗಳನ್ನು ಶರೀರಕ್ಕೆ ಸೇರಿಸಲು ಅಥವಾ ಹೊರಕ್ಕೆ ನೂಕಲು ಸಹ ನೀರು ಬೇಕಾಗುತ್ತದೆ. ಮೊದಲೇ ಶರೀರದಲ್ಲಿ ನೀರು ಕಡಿಮೆ ಇದೆ. ನೀರ್ಗಳೆತಕ್ಕೆ ಒಳಗಾಗಿದ್ದ ಅಂಗ ಪೂರ್ಣವಾಗಿ ನೀರಿಲ್ಲದಂತಾಗಿ ಆ ಜಾಗದಲ್ಲಿ ಹುಣ್ಣುಂಟಾಗುತ್ತದೆ. ಇದರ ಮೊದಲ ಚಿನ್ಹೆಯೇ ಬಾಯಿಹುಣ್ಣು ಇತ್ಯಾದಿಗಳು. ಇನ್ನೂ ಮುಂದುವರೆದರೆ ಹೊಟ್ಟೆಯ ಹುಣ್ಣು ಇತ್ಯಾದಿಗಳು, ವೃದ್ಧಾಪ್ಯದಲ್ಲಿನ 'ಬಾಯಿ ಒಣಗುವಿಕೆ'ಯೂ ಸಹ ನೀರ್ಗಳೆತವೇ ಆಗಿದೆ. ಇದಲ್ಲದೆ ಅಜೀರ್ಣ (Dyspepsia), ಹೆಗ್ಗರುಳುರಿತ (Colitis), ಅಪೆಂಡಿಸೈಟಿಸ್ (Appendicitis), ರೂಮೆಟೈಡ್ ಆರ್ಥೈಟಿಸ್, ಕೆಳಬೆನ್ನು ನೋವು ( Lowback pain), ಕುತ್ತಿಗೆ ನೋವು, ತಲೆನೋವು, ಒತ್ತಡ ಮತ್ತು ಖಿನ್ನತೆ (Stress and Depression), ರಕ್ತದೊತ್ತಡ, ರಕ್ತದಲ್ಲಿ ಹೆಚ್ಚು ಕೊಲೆಸ್ಟರಾಲ್, ಆಸ್ತಮ, ಮಧುಮೇಹ, ಕ್ಯಾನ್ಸರ್ ಮುಂತಾದವೆಲ್ಲವೂ ದೀರ್ಘ ನೀರ್ಗಳೆತದ ಪರಿಣಾಮವೇ ಆಗಿದೆ ಎಂಬ ವೈಜ್ಞಾನಿಕ ಸತ್ಯ ಅರಿವಿಗೆ ಬಂದಿದೆ.

" Water- it does a lot more than quench your thirst. Scientist say it might just be the simplest, coolest way to boost Energy, shed pounds, and even fight off cancer'- "ನೀರು ಬರೀ ಬಾಯಾರಿಕೆಯನ್ನು ಕಳೆಯುವುದಕ್ಕಿಂತ ಹೆಚ್ಚು ಕೆಲಸ ಮಾಡುತ್ತದೆ. ಶರೀರದ ಶಕ್ತಿಯನ್ನು ಹೆಚ್ಚಿಸಲು, ಬೊಜ್ಜು ಇಳಿಸಲು, ಕಡೆಗೆ ಕ್ಯಾನ್ಸರ್‌ನೊಂದಿಗೆ ಹೋರಾಡಲೂ ಸಹ ಇದು ತುಂಬಾ ಸರಳವಾದ, ತಂಪಾದ ಮಾರ್ಗವೆಂದು ವಿಜ್ಞಾನಿಗಳು ಹೇಳುತ್ತಾರೆ." By Michael Tennison.

ಹೆಚ್ಚು ನೀರು ಕುಡಿಯುವವರಲ್ಲಿ ಹೆಗ್ಗರುಳಿನ ಕ್ಯಾನ್ಸರ್ ಕಡಿಮೆ (colon cancer) ಎಂದು Fred Hutchinson Cancer Research centre, Seattle ತಿಳಿಸುತ್ತದೆ. ಅದರ ಹೇಳಿಕೆ ಹೀಗಿದೆ Women who drank more than four glasses of water a day had nearly half the odds of getting the disease of womwn who imbibed two glasses or less.

ಎರಡು ಲೋಟ ಅಥವಾ ಅದಕ್ಕಿಂತ ಕಡಿಮೆ ನೀರನ್ನು ಕುಡಿಯುವ ಹೆಂಗಸರಲ್ಲಿ ನಾಲ್ಕು ಲೋಟ ಅಥವಾ ಅದಕ್ಕಿಂತ ಹೆಚ್ಚು ನೀರನ್ನು ಕುಡಿಯುವವರಿಗಿಂತ ಹೆಚ್ಚು ರೋಗಗಳನ್ನು ಕಾಣಬಹುದು.

–ಮುಂದುವರೆಯುತ್ತದೆ.

## ವಚನಗಳು

ಉದಯ, ಮಧ್ಯಾಹ್ನ, ಅಸ್ತಮಾನ, ಕತ್ತಲೆ, ಬೆಳಗು,
ವಾರ, ಲಗ್ನ, ತಿಥಿ, ಮಾಸ, ಸಂವತ್ಸರ ಹೋಗುತ್ತ
ಬರುತ್ತಲಿವೆ. ಇವ ನೋಡಿದವರೆಲ್ಲ ಇದರೊಳಗೆ
ಹೋಗುತ್ತ ಬರುತ್ತ ಇದ್ದಾರೆ. ಜಗಕ್ಕೆ ಇವೀಗ
ಇಷ್ಟವಾಗಿಪ್ಪವು. ಎನ್ನ ದೇವಂತೆ ಇವೊಂದೂ
ಇಲ್ಲ. ದಿನ–ಕಾಲ–ಯುಗಜುಗ–ಪ್ರಳಯಕ್ಕೆ
ಹೊರಗಾದ ಆ ದೇವನ ಅಂಗವಿಸಿ ಮುಟ್ಟಿ ಹಿಡಿದ
ಕಾರಣ ಎಮ್ಮ ಶರಣರು ಪ್ರಳಯಕ್ಕೆ
ಹೊರಗಾದರು. ಇದನರಿದು, ಅಂತಪ್ಪ ಶರಣರ
ಪಾದವ ನಂಬಿ ಹುಟ್ಟು ಗೆಟ್ಟು ಬಟ್ಟ
ಬಯಲಾದೆನಯ್ಯ ಬಸವಪ್ರಿಯ
ಕೂಡಲಚೆನ್ನಬಸವಣ್ಣ!

–ಹಡಪದ ಅಪ್ಪಣ್ಣ



ಸ್ಥಾಪನೆ : 1995 ಶುಭಾಶಯಗಳೊಂದಿಗೆ ದೂರವಾಣಿ : 2277267

ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ ಫ್ಯಾಕ್ಸ್ : 2277267



ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ.ಹೆಚ್.ರಸ್ತೆ, ತುಮಕೂರು-572 102

ಪ್ರಗತಿ ನೋಟ (31-3-2007 ರಲ್ಲಿದ್ದಂತೆ) ಮತ್ತು ಠೇವಣಿಗಳು

(ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ | 3558 | ಠೇವಣಿಗಳು | 2112.30 |
| ಅಧಿಕೃತ ಷೇರು ಬಂಡವಾಳ | 200.00 | ದುಡಿಯುವ ಬಂಡವಾಳ | 2635.95 |
| ಪಾವತಿಯಾದ ಷೇರು ಬಂಡವಾಳ | 114.79 | ಸಾಲಗಳು | 1534.46 |
| ಕಾಯ್ದಿರಿಸದ ನಿಧಿಗಳು | 308.86 | ನಿವ್ವಳ ಲಾಭ | 31.92 |

ಠೇವಣಿ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 46 ದಿವಸಗಳಿಂದ 90 ದಿವಸಗಳವರೆಗೆ | - ಶೇ. 7.5 | 1 ವರ್ಷದಿಂದ 3 ವರ್ಷದವರೆಗೆ | - ಶೇ. 10 |
| 91 ದಿವಸಗಳಿಂದ 1 ವರ್ಷದವರೆಗೆ | - ಶೇ. 9.5 | 3 ವರ್ಷ ಮೇಲ್ಪಟ್ಟು | - ಶೇ. 9 |

ಹಿರಿಯ ನಾಗರಿಕರಿಗೆ, ವಿಧವೆಯರಿಗೆ, ಧರ್ಮದತ್ತಿ ಸಂಸ್ಥೆಗಳಿಗೆ, ಅಂಗವಿಕಲರಿಗೆ
ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ 1% ಅಧಿಕ ಬಡ್ಡಿ ದರವನ್ನು ನೀಡಲಾಗುವುದು.

ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ.)

ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ ಅಡಮಾನ ಸಾಲ, ಹೊಸ/ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ, ವಸ್ತು ಬಳಕೆದಾರರ ಸಾಲ, ಮೀರಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 12 ರಿಂದ 13.5

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

ಶ್ರೀ ಹೆಚ್.ಕೆ. ಶಿವಪ್ರಕಾಶ್
ವ್ಯವಸ್ಥಾಪಕರು

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು – 572 103

| | | |
|---|---|---|
| ಸದಸ್ಯರ ಸಂಖ್ಯೆ | : | 1446 |
| ಷೇರು ಮೊಬಲಗು | : | ರೂ. 42,81,400-00 |
| ವಾರ್ಷಿಕ ವಹಿವಾಟು | : | 6.61 ಕೋಟಿ |

*ಖಾಯಂ ಠೇವಣಿ ಮೇಲಿನ ಬಡ್ಡಿ :*

56 ದಿನಗಳಿಂದ 1 ವರ್ಷಕ್ಕೆ 7.5% 1 ವರ್ಷದಿಂದ 2 ವರ್ಷಕ್ಕೆ 8.5%
2 ವರ್ಷದಿಂದ 3 ವರ್ಷಕ್ಕೆ 9.5% 3 ವರ್ಷಕ್ಕೆ ಮೇಲ್ಪಟ್ಟು 10.5%

ಸದಸ್ಯರುಗಳಿಗೆ ಸಾಲದ ಸೌಲಭ್ಯ : ರೂ. 3,00,000 ಗಳವರೆಗೆ

ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ
ಅಧ್ಯಕ್ಷರು

ಶ್ರೀ ಸಿ. ಮೋಹನ್ ಕುಮಾರ್
ಕಾರ್ಯದರ್ಶಿ

RNI No. 17139/69 "Siddaganga" Monthly - Postal Reg. No. KA/SK/TMR/385/2006-08



ತುಮಕೂರು ಬಟವಾಡೆಯಲ್ಲಿರುವ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ನಡೆದ ವಜ್ರ ಕಿರೀಟ ಧಾರಣ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಗಳವರು ಹಾಗೂ ದಾನಿಗಳು



ತುಮಕೂರಿನಲ್ಲಿರುವ ಶ್ರೀ ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ನಡೆದ ಪ್ರಥಮ ವರ್ಷದ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ಸ್ವಾಗತ ಸಮಾರಂಭವನ್ನು ಉದ್ಘಾಟಿಸುತ್ತಿರುವ ಪರಮಪೂಜ್ಯ ಶ್ರೀಗಳವರು



ಕ್ಯಾತಸಂದ್ರದಲ್ಲಿ ನೂತನವಾಗಿ ನಿರ್ಮಿಸಿರುವ ಆರಕ್ಷಕ ಠಾಣೆಯನ್ನು ಲೋಕಾರ್ಪಣೆ ಮಾಡುತ್ತಿರುವ ಪರಮಪೂಜ್ಯ ಶ್ರೀಗಳವರು. ಈ ಸಂದರ್ಭದಲ್ಲಿ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿ ಡಾ. ಪಿ.ಎಸ್. ಹರ್ಷ ಅವರು ಉಪಸ್ಥಿತರಿದ್ದರು.



ಗುಬ್ಬಿ ತಾಲ್ಲೂಕು ಸಾಗರನಹಳ್ಳಿಯಲ್ಲಿ ನಿರ್ಮಿಸಿರುವ ಕಲ್ಯಾಣದಪ್ಪಗಳ ಕಲ್ಯಾಣ ಮಂಟಪವನ್ನು ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಲೋಕಾರ್ಪಣೆ ಮಾಡುತ್ತಿರುವುದು



ಶ್ರೀ ಸುದರ್ಶನ ಮತ್ತು ಶ್ರೀ ಟಿ.ವಿ. ರಾಜು ಅವರು ಹೊರತಂದ ಸಿದ್ಧ ಶುದ್ಧ ಶಿವಯೋಗಿ ಶ್ರೀ ಶಿವಕುಮಾರಸ್ವಾಮಿ ಶ್ರೀವಾಣಿ ಗೀತೆ ಕ್ಯಾಸೆಟ್‌ನ್ನು ಪೂಜ್ಯ ಶ್ರೀಗಳವರು ಲೋಕಾರ್ಪಣೆ ಮಾಡುತ್ತಿರುವುದು.



ತುಮಕೂರು ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನಲ್ಲಿ ನಡೆದ "ಪುನಶ್ಚೇತನ-೨೦೦೮" ಕಾರ್ಯಾಗಾರವನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉದ್ಘಾಟಿಸುತ್ತಿರುವುದು.

Cover printed at : Geetanjali Graphics, # 4, M.S.R. Indl. Estate, Bangalore-54. Ph : 23604087